



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 53

| ಸಂಪುಟ: ೦೬ ಸಂಚಿಕೆ: ೩ | ಜೂನ್ ೨೦೧೯ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 06 Issue 3 | June 2019 | Pages - 8 | A. Sub. - Rs. 20/- | Editor : Sri. B.R. Ravindranath |



ದಿ॥ ಪ್ರೊ ಎಂ.ವಿ. ಸೀತಾರಾಮಯ್ಯ
ಸಂಸ್ಥಾಪಕರು

ಪ್ರೊ. ಎಂ. ಎಚ್. ಕೃಷ್ಣಯ್ಯ
ಗೌರವಾಧ್ಯಕ್ಷರು
ಮೊ : ೯೪೫೬೫೮೮೮೫

**ಪದಾಧಿಕಾರಿಗಳು**

ಅಧ್ಯಕ್ಷರು
ಡಾ. ಆರ್. ಲಕ್ಷ್ಮೀನಾರಾಯಣ
ಮೊ : ೯೪೪೯೦೨೮೯೬

ಗೌ॥ ಕಾರ್ಯದರ್ಶಿಗಳು :
ಡಾ. ವಿಜಯಾ ಸುಬ್ಬರಾಜ್
ಮೊ : ೯೮೬೯೨೮೮೭೬
ಶ್ರೀ ಬಿ. ಆರ್. ರವೀಂದ್ರನಾಥ್
ಮೊ : ೯೪೪೮೩೬೬೮೪೯

ಕೋಶಾಧ್ಯಕ್ಷರು
ಡಾ॥ ಎಸ್. ಅನಿಲ್ ಕುಮಾರ್
ಮೊ : ೯೮೬೪೪೬೪೫೫೬

ಹಸ್ತಪ್ರತಿ ವಿಭಾಗದ
ಸಂಯೋಜನಾಧಿಕಾರಿ
ಶ್ರೀ ಬಿ.ಎಸ್. ಗುರುಪ್ರಸಾದ್
ಮೊ : ೯೫೩೬೯೦೭೩೩೭


**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–


ವಿಳಾಸ

ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ


೦೬ –೦೫–೨೦೧೯

## ಬಿ.ಎಂ.ಶ್ರೀ ಪ್ರತಿಷ್ಠಾನ: ನಲವತ್ತರ ನಲಿವು

ದಿನಾಂಕ ಮೇ ೬ ರಂದು ಬಿಎಂಶ್ರೀ ಪ್ರತಿಷ್ಠಾನದ ಪದಾಧಿಕಾರಿಗಳು, ಕಾರ್ಯಕಾರಿ ಸಮಿತಿ ಸದಸ್ಯರು ಹಾಗೂ ಸಿಬ್ಬಂದಿ ವರ್ಗದವರು ಬಿಎಂಶ್ರೀ ಪ್ರತಿಷ್ಠಾನದ ಸ್ಥಾಪಕ ಪ್ರೊ.ಎಂವಿ.ಸೀ ಅವರ ಪುತ್ಥಳಿಗೆ ಹಾರ ಹಾಕಿ ಸ್ಥಾಪನಾ ದಿನವನ್ನು ನೆನಪಿಸಿಕೊಂಡರು. ನಂತರ ನಡೆದ ಸರಳ ಸಭೆಯಲ್ಲಿ ಕಳೆದ ನಲವತ್ತು ವರ್ಷಗಳಲ್ಲಿ ನಡೆದ ಪ್ರತಿಷ್ಠಾನದ ಚಟುವಟಿಕೆಗಳನ್ನು ನೆನಪಿಸಿಕೊಳ್ಳಲಾಯಿತು ಹಾಗೂ ಪ್ರಸಕ್ತ ವರ್ಷದಲ್ಲಿ ಬಿಎಂಶ್ರೀ ಪ್ರತಿಷ್ಠಾನ – ೪೦ರ ನಲಿವು ಶೀರ್ಷಿಕೆಯಡಿಯಲ್ಲಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಚಿಂತನೆ ನಡೆಸಲಾಯಿತು. ಈ ಸಂಭ್ರಮದಲ್ಲಿ ಡಾ.ಲಕ್ಷ್ಮಿನಾರಾಯಣ, ಶ್ರೀ ರವೀಂದ್ರನಾಥ, ಡಾ. ವಿಜಯಾ ಸುಬ್ಬರಾಜ್, ಡಾ. ಅನಿಲ್ ಕುಮಾರ್, ಶ್ರೀ ಗುರುಪ್ರಸಾದ್, ಶ್ರೀಮತಿ ಪದ್ಮಾ, ಶ್ರೀಮತಿ ವರಲಕ್ಷ್ಮಿ, ಶ್ರೀಮತಿ ಗಾಯತ್ರಿ, ಕಾರ್ಯಕಾರಿ ಸಮಿತಿ ಸದಸ್ಯರಾದ ಡಾ.ವಾದಿರಾಜ್ ಹಾಗೂ ಶ್ರೀ ಡಿ.ನಂ. ವೆಂಕಟರಮಣಯ್ಯ, ಪ್ರತಿಷ್ಠಾನದ ಅಭಿಮಾನಿಗಳಾದ ಶ್ರೀ ವಿಶ್ವನಾಥ, ಶ್ರೀ ವೆಂಕಟರಮಣ ಭಾರತಿ ಮುಂತಾದವರು ಉಪಸ್ಥಿತರಿದ್ದರು.



ಕರ್ನಾಟಕದ ಪ್ರತಿಷ್ಠಿತ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಸ್ಥೆಯಾದ ಬಿ.ಎಂ.ಶ್ರೀ ಪ್ರತಿಷ್ಠಾನ ಸ್ಥಾಪನೆಯಾಗಿ ಇದೇ ಮೇ ೬ಕ್ಕೆ ನಲವತ್ತು ವರ್ಷಗಳು ತುಂಬಿವೆ. ಕನ್ನಡ ನವೋದಯದ ಕಾರಣಪುರುಷರೆಂದು ಖ್ಯಾತರಾದ ಆಚಾರ್ಯ ಶ್ರೀ ಅವರ ಹೆಸರಿನ ಈ ಪ್ರತಿಷ್ಠಾನವನ್ನು ಎಂ.ವಿಸೀ ಅವರು ೦೬– ೦೫–೧೯೭೯ರಂದು ಸ್ಥಾಪಿಸಿ ರಾಷ್ಟ್ರಕವಿ ಕುವೆಂಪು ಅವರಿಂದ ಉದ್ಘಾಟನೆ ಮಾಡಿಸಿದಂದಿನಿಂದ ಇಲ್ಲಿಯವರೆಗೆ ಅನೇಕ ಮಹತ್ವದ ಸಾಧನೆಗಳನ್ನು ಮಾಡಿದೆ. ಪಾಂಡಿತ್ಯ ಸಂವರ್ಧನೆ, ಮತ್ತು ಸಂಶೋಧನೆಗಳಿಗಾಗಿ ಮೀಸಲಾದ ಈ ಸಂಸ್ಥೆ ಅಮೂಲ್ಯವಾದ ಸಹಸ್ರಾರು ಹಸ್ತಪ್ರತಿಗಳ ಭಂಡಾರದ ಜೊತೆಗೆ ಸಹಸ್ರಾರು ಮಹತ್ವದ ಗ್ರಂಥಗಳ ಭಂಡಾರವನ್ನೂ ಹೊಂದಿದೆ. ಲೋಚನ ಎಂಬ ಷಣ್ಮಾಸಿಕ ವಿದ್ವತ್ ಪತ್ರಿಕೆಯನ್ನು ಪ್ರಕಟಿಸಿಕೊಂಡು ಬಂದಿದೆ.ಅದರಲ್ಲಿ ನಾಡಿನ ಬಹುತೇಕ ಎಲ್ಲ ವಿದ್ವಾಂಸರ ಲೇಖನಗಳು ನಿರಂತರವಾಗಿ ಪ್ರಕಟವಾಗುತ್ತ ಬಂದಿವೆ.ಇದುವರೆಗೆ ಅಕ್ಷರಶಃ ನೂರಾರು ದತ್ತಿ ಉಪನ್ಯಾಸಗಳು, ಹಲವಾರು ವಿಚಾರ ಸಂಕಿರಣಗಳನ್ನು ನಡೆಸಿಕೊಂಡು ಬಂದಿದೆ.ಪ್ರತಿಷ್ಠಿತ ಗ್ರಂಥಗಳನ್ನು ಪ್ರಕಟಿಸುತ್ತ ಬಂದಿರುವ ಹೆಮ್ಮೆಯೂ ಈ ಸಂಸ್ಥೆಯದಾಗಿದೆ.ಸಂಸ್ಥೆಯ ಬಗೆಗೆ ಸಾರ್ವಜನಿಕರಲ್ಲಿ ಅತ್ಯಂತ ಆದರ ಭಾವವಿರುವುದಕ್ಕೆ ಸಾಕ್ಷಿಯಾಗಿ ಇಲ್ಲಿ ಸ್ಥಾಪಿತವಾಗಿರುವ ೫೦ಕ್ಕೂ ಹೆಚ್ಚು ದತ್ತಿಗಳೇ ಸಾಕ್ಷಿ.ಆಚಾರ್ಯ ಶ್ರಿ ಅವರ ಹೆಸರಿನಲ್ಲಿ ಅವರ ಮೊಮ್ಮಗಳು ಶ್ರೀಮತಿ ಕಮಲಿನಿ ಬಾಲೂರಾವ್ ಸ್ಥಾಪಿಸಿರುವ ಒಂದು ಲಕ್ಷ ರೂಪಾಯಿ ಮೌಲ್ಯದ ಶ್ರೀ ಸಾಹಿತ್ಯ ಪ್ರಶಸ್ತಿಯನ್ನು ಕನ್ನಡ ಸಾಹಿತ್ಯಕ್ಕೆ ಮಹತ್ವದ ಕೊಡುಗೆ ನೀಡಿದವರಿಗೆ ನೀಡುತ್ತ ಬಂದಿದೆ. ಹಾಗೆಯೇ ಎಂವಿಸೀ ಪ್ರಶಸ್ತಿ, ಶಾ. ಬಾಲುರಾವ್ ಹೆಸರಿನ ಅನುವಾದ ಪ್ರಶಸ್ತಿ, ಮತ್ತು ಯುವ ಲೇಖಕ ಪ್ರಶಸ್ತಿ(ತಲಾ ೨೫ ಸಾವಿರ)ಗಳು ಪ್ರತಿಷ್ಠಾನದ ಹೆಮ್ಮೆಯ ಪುರಸ್ಕಾರಗಳು. ಹಂಪಿಯ ಕನ್ನಡ ವಿಶ್ವ ವಿದ್ಯಾನಿಲಯದ ಮಾನ್ಯತೆ ಪಡೆದ ಎಂ. ವಿ. ಸೀ ಸ್ನಾತಕೋತ್ತರ ಮತ್ತು ಸಂಶೋಧನ ಕೇಂದ್ರದಿಂದ ಇದುವರೆಗೆ ಪಿಎಚ್. ಡಿ ಮತ್ತುಎಂ. ಫಿಲ್ ಪದವಿಗಳನ್ನು ಪಡೆದಿದ್ದಾರೆ.ಈ ನಮ್ಮ ಪ್ರತಿಷ್ಠಿತ ಸಂಸ್ಥೆ ನಲವತ್ತನೆಯ ವರ್ಷ ಪೂರೈಸಿದ ನೆನಪಿನಲ್ಲಿ ಈ ವರ್ಷ ಪೂರ್ತಿ ವಿಶೇಷ ವಿಚಾರ ಸಂಕಿರಣಗಳು, ಉಪನ್ಯಾಸಗಳನ್ನು ನಡೆಸುವ ಮತ್ತು ಗ್ರಂಥ ಪ್ರಕಟಣೆಗಳನ್ನು ಕೈಗೊಳ್ಳುವ ಉದ್ದೇಶವಿದೆ.ನಲವತ್ತರ ನಲಿವಿಗಾಗಿ ಪ್ರಸ್ತುತ ರಾಷ್ಟ್ರ ಕವಿಗಳ ಸಾಹಿತ್ಯ ಮಂಥನ–ವಿಚಾರ ಸಂಕಿರಣ ಸಂಪನ್ನಗೊಳ್ಳುತ್ತಿದೆ.

## ಸಂಪಾದಕೀಯ

ಲೋಕಸಭೆ ಚುನಾವಣೆಗಳು ಪೂರ್ಣಗೊಂಡು ಫಲಿತಾಂಶಗಳು ಬಂದಿರುತ್ತವೆ. ಭಾರತ ದೇಶ ಪ್ರಗತಿ ಹೊಂದುವಲ್ಲಿ ಚುನಾವಣೆಗಳು ಪ್ರಮುಖ ಘಟ್ಟಗಳಾಗಿರುತ್ತವೆ. ಪ್ರತಿ ಬಾರಿ ನೂತನ ಸರ್ಕಾರ ರಚನೆಯಾದ ನಂತರ ಕೇಂದ್ರ ಸರ್ಕಾರದ ನಿಲುವುಗಳು ಹಾಗೂ ಕೈಗೊಳ್ಳುವ ಕ್ರಮಗಳು ಚುನಾವಣೆಯ ಫಲಿತಾಂಶಗಳನ್ನು ಆಧರಿಸಿರುತ್ತವೆ.

ಆದರೆ ಚುನಾವಣೆಗಳು ಹಾಗೂ ಅವುಗಳ ಫಲಿತಾಂಶಗಳನ್ನು ಹೊರತುಪಡಿಸಿದ ಪ್ರಪಂಚ ವಿಶಾಲವಾಗಿದ್ದು ದೇಶದ ಪ್ರಗತಿಗಾಗಿ ಕೋಟ್ಯಾಂತರ ಭಾರತೀಯರು ಹಗಲಿರುಳು ಅವಿರತವಾಗಿ ದುಡಿದು ತಮ್ಮ ಜೀವನಗಳನ್ನು ಸವೆಸುತ್ತಿದ್ದಾರೆ.ಅಂತಹವರ ಶ್ರಮದಿಂದ ಭಾರತ ದೇಶ ಈ ಮಟ್ಟಕ್ಕೆ ಪ್ರಗತಿ ಹೊಂದಿರುತ್ತದೆ.

ಬಿ.ಆರ್ ರವೀಂದ್ರನಾಥ್
ಸಂಪಾದಕರು

## ಜೂನ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

**ಮಾಹಿತಿ ಸಂಗ್ರಹ: ಶ್ರೀ ಬುಕ್ಕಾಂಬುಧಿ ಸತ್ಯನಾರಾಯಣ**

ಹೆಸರು: ಮಾಸ್ತಿ ವೆಂಕಟೇಶ ಅಯ್ಯಂಗಾರ್

ಕಾವ್ಯನಾಮ; 'ಶ್ರೀನಿವಾಸ'

ಹುಟ್ಟಿದ ಸ್ಥಳ- ದಿನಾಂಕ; ಕೋಲಾರ ಜಿಲ್ಲೆಯ ಮಾಸ್ತಿ ಗ್ರಾಮದಲ್ಲಿ, ೦೬-೦೬-೧೮೯೧

ತಂದೆ-ತಾಯಿ; ರಾಮಸ್ವಾಮಿ ಅಯ್ಯಂಗಾರ್, ತಿರುಮಲಮ್ಮ

ಶಿಕ್ಷಣ; ಇಂಗ್ಲೀಷ್ ಸಾಹಿತ್ಯದಲ್ಲಿ ಎಂ.ಏ

ವೃತ್ತಿ; ಆಗಿನ ಮೈಸೂರು ಸರಕಾರದಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ, ಜನ ಮನ್ನಣೆಗಳಿಸಿ, ಜಿಲ್ಲಾಧಿಕಾರಿ ಹುದ್ದೆಗೆ ರಾಜೀನಾಮೆ ಸಲ್ಲಿಸಿ ಸಾಹಿತ್ಯ ಸೇವೆಯಲ್ಲಿ ತೊಡಗಿಕೊಂಡರು.

ಸಾಹಿತ್ಯಸಾಧನೆಗಳು; 'ಜೀವನ' ಮಾಸಪತ್ರಿಕೆಯನ್ನು ನಡೆಸಿದರು. ಕರ್ನಾಟಕ ಏಕೀಕರಣ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದರು.

ಮಾಸ್ತಿಯವರು ಒಟ್ಟು ೧೨೩ಕೃತಿಗಳನ್ನು ರಚಿಸಿದರು. ಇದರಲ್ಲಿ ಸಣ್ಣ ಕತೆಗಳು, ಕಾದಂಬರಿ, ನಾಟಕಗಳು, ಪ್ರಬಂಧಗಳು, ಧಾರ್ಮಿಕ ಕೃತಿಗಳು, ಕವಿತೆಗಳ ಸಂಗ್ರಹ, ಕಾವ್ಯ ಅನುವಾದಗಳು ಮತ್ತು ಜೀವನ ಚರಿತ್ರೆ ಹೀಗೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ತಮ್ಮ ಛಾಪು ಮೂಡಿಸಿದ್ದಾರೆ.

ಪ್ರಶಸ್ತಿ-ಗೌರವಗಳು; ಜ್ಞಾನಪೀಠ ಪ್ರಶಸ್ತಿ ಮೈಸೂರು ವಿಶ್ವವಿದ್ಯಾಲಯದ ಡಿ.ಲಿಟ್ ಕರ್ನಾಟಕ ವಿಶ್ವವಿದ್ಯಾಲಯದ ಡಿ.ಲಿಟ್, ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪದವಿ೧೯೫೩, ದಕ್ಷಿಣ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ, ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಆದ್ಯಕ್ಷತೆ, ಮೈಸೂರು ಮಹಾರಾಜರು ನೀಡಿದ ರಾಜಸೇವ ಪ್ರಸಕ್ತ ಎಂಬ ಗೌರವ, ಮಾಸ್ತಿ ಕನ್ನಡದ ಆಸ್ತಿ ಎಂಬ ಹೆಗ್ಗಳಿಕೆ, ೧೯೭೨ ರಲ್ಲಿ ಶ್ರೀನಿವಾಸ ಎಂಬ ಅಭಿನಂದನಾ ಗ್ರಂಥ.

ನಿಧನ; ೦೬-೦೬-೧೯೮೬

ಹೆಸರು: ಅಕ್ಕಿ ಹೆಬ್ಬಾಳು ನರಸಿಂಹ ಮೂರ್ತಿರಾವ್

ಕಾವ್ಯನಾಮ; ಎ.ಎನ್. ಮೂರ್ತಿರಾವ್

ಹುಟ್ಟಿದ ಸ್ಥಳ- ದಿನಾಂಕ; ಮಂಡ್ಯ ಜಿಲ್ಲೆಯ ಅಕ್ಕಿ ಹೆಬ್ಬಾಳು ಗ್ರಾಮ, ೧೬-೦೬-೧೯೦೦

ತಂದೆ-ತಾಯಿ; ಸುಬ್ಬರಾಯರು, ವೆಂಕಟಲಕ್ಷ್ಮಮ್ಮ

ಶಿಕ್ಷಣ; ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ.ಎ. ಮೈಸೂರು ವಿಶ್ವವಿದ್ಯಾನಿಲಯದಿಂದ ಆಂಗ್ಲ ಸಾಹಿತ್ಯದಲ್ಲಿ ಎಂ.ಎ. ಪದವಿ ಪಡೆದರು.

ವೃತ್ತಿ; ಮಹಾರಾಜ ಹೈಸ್ಕೂಲ್ಲಿನಲ್ಲಿ ಉಪಾಧ್ಯಾಯರಾಗಿ ಸೇವೆ ಪ್ರಾರಂಭಿಸಿ ಹಲವಾರು ಹುದ್ದೆಗಳನ್ನು ಅಲಂಕರಿಸಿ ನಂತರ ಮೈಸೂರು ಮಹಾರಾಜ ಕಾಲೇಜಿನಲ್ಲಿ ಪ್ರೊಫೆಸರ್ ಆಗಿ ಸೇವೆ ಸಲ್ಲಿಸಿ ೧೯೫೫ರಲ್ಲಿ ನಿವೃತ್ತರಾದರು.

**೬ನೇ ಪುಟಕ್ಕೆ**

### ಡಾ. ತಾಳ್ತಜೆ ವಸಂತಕುಮಾರ್

ವಿದ್ವತ್ತು ಮತ್ತು ಅದಕ್ಕೆ ತಗಲುವಂಥ ಮೌಲ್ಯಯುತವಾದ ಕೃತಿಗಳನ್ನು ನೀಡಿದ ತಾಳ್ತಜೆಯವರು ಮುಂಬೈ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಮೂರು ದಶಕಗಳಿಗೂ ಹೆಚ್ಚು ದೀರ್ಘ ಕಾಲ ಅಧ್ಯಾಪಕರಾಗಿ ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ ಆ ವಿಭಾಗವನ್ನು ಚೆನ್ನಾಗಿ ದೃಢಗೊಳಿಸಿದವರು. ಸಂಶೋಧನೆ ವಿಮರ್ಶೆಗಳ ಕ್ಷೇತ್ರದಲ್ಲಿ ಕ್ರಿಯಾಶೀಲರಾಗಿ ದುಡಿದು ಸಿಂಗಾರ, ಮುತ್ತಿನ ಸತ್ತಿಗೆ, ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಸಂಶೋಧನ ರಂಗ, ಶಬ್ದಾರ್ಥ ಮೀಮಾಂಸೆ, ಸಾರಸ ಮೊದಲಾದ ಕೃತಿಗಳನ್ನು ರಚಿಸಿರುವುದಲ್ಲದೆ ಮರೀಚಿಕೆ ಎಂಬ ಕಾದಂಬರಿಯನ್ನೂ ರಚಿಸಿದ್ದಾರೆ. ವಿಶ್ಲೇಷಣೆಯಿಂದ ಕೂಡಿದ ಅವರ ಕೃತಿಗಳು ಸಮತೋಲನ ದೃಷ್ಟಿಗೆ ನಿದರ್ಶನಗಳಾಗಿವೆ.

### ಡಾ. ಕೆ. ಸತ್ಯನಾರಾಯಣ

ಕಥೆಗಾರ. ಕಾದಂಬರಿಕಾರ ಮತ್ತು ಪ್ರಬಂಧಕಾರರೆಂದು ಹೆಸರಾಗಿರುವ ಡಾ. ಕೆ.ಸತ್ಯನಾರಾಯಣ ಅವರು ಅರ್ಥಶಾಸ್ತ್ರದಲ್ಲಿ ಎಂ.ಎ ಮಾಡಿ ಆದಾಯ ತೆರಿಗೆ ಇಲಾಖೆಯ ಅತ್ಯುನ್ನತ ಅಧಿಕಾರಿಯಾಗಿ ನಿವೃತ್ತರಾದವರು. ಇದುವರೆಗೆ ಕಥೆ, ಕಾದಂಬರಿ, ಪ್ರಬಂಧಗಳು, ಅಂಕಣಬರಹ, ಪ್ರವಾಸಕಥನ ವಿಮರ್ಶೆ, ಎಲ್ಲ ಸೇರಿ ಸುಮಾರು ನಲವತ್ತು ಕೃತಿಗಳನ್ನು ರಚಿಸಿದ್ದಾರೆ. ಗೌರಿ, ಒಂದು ಕಥಾನಕದ ಮೂಲಕ, ಸನ್ನಿಧಾನ, ಕಾಲಜಿಂಕೆ ಅವರ ಕೆಲವು ಕಾದಂಬರಿಗಳಾದರೆ, ನಿಮ್ಮ ಮೊದಲ ಪ್ರೇಮದ ಕಥೆ, ಈ ತನಕದ ಕಥೆಗಳು, ಭಾವ ಕಲ್ಲೋಲ ಅವರ ಪ್ರಮುಖ ಕಥಾಸಂಗ್ರಹಗಳು.ನಮ್ಮ ಪ್ರೀತಿಯ ಕ್ರಿಕೆಟ್, ದಾಂಪತ್ಯಕ್ಕೊಂದು ಶೀಲ, ಲೋಕಪ್ರಬಂಧ ಅವರ ಕೆಲವು ಪ್ರಬಂಧ ಸಂಕಲನಗಳು.ಕಾದಂಬರಿ, ಮತ್ತು ಪ್ರಬಂಧ ಪ್ರಕಾರಕ್ಕೆ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ, ಮಾಸ್ತಿ ಪುರಸ್ಕಾರ ಮತ್ತು ಬಿ.ಎಂ. ಶ್ರೀ ಪ್ರತಿಷ್ಠಾನ ಕೊಡಮಾಡುವ ಎಂ.ವಿ.ಸೀ ಪ್ರಶಸ್ತಿ ಪುರಸ್ಕೃತರು.

## ಪ್ರಕಟಣೆ

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಸ್ಥಾಪಿತವಾಗಿರುವ 'ಗೋವಿಂದ ಜಾಲಿಹಾಳ ದತ್ತಿ' ಕಾರ್ಯಕ್ರಮದ ಅಂಗವಾಗಿ ೨೦೧೯ರ ಜೂನ್ ೩೦ರಂದು ಭಾನುವಾರ ೧೩ ರಿಂದ ೧೮ ವರ್ಷಗಳ ನಡುವಣ ಯುವಜನತೆಗಾಗಿ 'ಭಕ್ತಿಗೀತೆ ಗಾಯನ' ಸ್ಪರ್ಧೆಯನ್ನು ಪ್ರತಿಷ್ಠಾನದ ಎಂ.ವಿ.ಸೀ ಸಭಾಂಗಣದಲ್ಲಿ ನಡೆಸಲಾಗುವುದು.ಸ್ಪರ್ಧೆಯಲ್ಲಿ ಗೆದ್ದವರಿಗೆ ಬಹುಮಾನಗಳನ್ನೂ ಪ್ರಶಸ್ತಿ ಪತ್ರಗಳನ್ನೂ ನೀಡಲಾಗುವುದು.ಸ್ಪರ್ಧೆಯು ಅಂದು ಬೆಳಗ್ಗೆ ೧೦-೩೦ ಗಂಟೆಗೆ ಆರಂಭವಾಗುತ್ತದೆ.ಅನಂತರ ಬಹುಮಾನ ವಿತರಣೆ ನಡೆಯುತ್ತದೆ. ಆಸಕ್ತರು ಹುಟ್ಟಿದ ತಾರೀಖಿನ ಬಗೆಗಿನ ದಾಖಲೆಯೊಡನೆ ದಿನಾಂಕ: ೧೫-೬-೨೦೧೯ರ ಒಳಗೆ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಬಹುದು. ಪ್ರವೇಶ ಶುಲ್ಕವಿಲ್ಲ. ಹೆಚ್ಚಿನ ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಬಹುದು. ದೂರವಾಣಿ ಸಂಖ್ಯೆ- ೨೬೬೧೫೮೭೭/ ೨೬೬೭೬೭೭೩

## ನುಡಿ ಆರಾಧಕರ ಸ್ಮರಣೆ ಸರಣಿ ಕಾರ್ಯಕ್ರಮ

ನುಡಿ ಆರಾಧಕರ ಸ್ಮರಣೆ ಸರಣಿ ಕಾರ್ಯಕ್ರಮ

ದಿನಾಂಕ : ೨೯-೦೭-೨೦೧೯ ರಂದು ಬಿ.ಎಂ.ಶ್ರೀ ಪ್ರತಿಷ್ಠಾನವು ನೂತನವಾಗಿ ಹಮ್ಮಿಕೊಂಡಿರುವ ನುಡಿ ಆರಾಧಕರ ಸ್ಮರಣೆ ಸರಣಿ ಕಾರ್ಯಕ್ರಮದ ಅಡಿಯಲ್ಲಿ ಕನ್ನಡ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿರುವ ಮಾಸ್ತಿ ವೆಂಕಟೇಶ ಐಯ್ಯಂಗಾರ್, ಎ.ಎನ್. ಮೂರ್ತಿರಾವ್, ಸೇಡಿಯಾಪು ಕೃಷ್ಣಭಟ್ಟ, ತ.ಸು. ಶಾಮರಾಯರು, ಜಯದೇವಿ ತಾಯಿ ಲಿಗಾಡೆ, ಸಿದ್ದಯ್ಯ ಪುರಾಣಿಕ, ನಿರಂಜನ, ಬಿ.ವೆಂಕಟಾಚಾರ್ಯ, ಫ.ಗು. ಹಳಕಟ್ಟಿ, ಡಿ. ಆರ್. ನಾಗರಾಜ್ ಅವರುಗಳ ಬದುಕು ಬರಹಗಳ ಬಗ್ಗೆ ವಿಚಾರ ಮಂಡನೆ ಮಾಡಲು ಸಾಹಿತ್ಯಾಸಕ್ತರಿಗೆ ಆಹ್ವಾನ ನೀಡಲಾಗುತ್ತಿದೆ.ವಿಚಾರ ಮಂಡನೆ ಮಾಡಲು ನೋಂದಾಯಿಸಿಕೊಳ್ಳಲು ಕೊನೆಯ ದಿನಾಂಕ ೨೦ನೇ ಜುಲೈ ೨೦೧೯. ವಿವರಗಳಿಗೆ ಸಂಪರ್ಕಿಸಿ : ಬಿ.ಎಂ.ಶ್ರೀ ಪ್ರತಿಷ್ಠಾನ, ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ, ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ, ನ.ರಾ. ಕಾಲೋನಿ, ಬೆಂಗಳೂರು-೫೬೦೦೧೯

ದೂರವಾಣಿ ಸಂಖ್ಯೆ: ೨೬೬೧೫೮೭೭, ೨೬೬೭೬೭೭೩

# ಜೂನ್ ೨೦೧೯ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ





**೦೫-೦೬-೨೦೧೯ ಬುಧವಾರ ಸಂಜೆ ೫-೩೦ ಗಂಟೆಗೆ**

**'ಸಾಕ್ಷ್ಯಚಿತ್ರ ಪ್ರದರ್ಶನ'**

**ಭಾರತದ ಶ್ರೇಷ್ಠ ಸಾಹಿತಿಗಳನ್ನು ಕುರಿತು**

ಶ್ರೀ ವಿ.ಎಂ. ಬಶೀರ್, ಖ್ಯಾತ ಮಳಯಾಳಂ ಸಾಹಿತಿ

**೦೮ -೦೬-೨೦೧೯ ಶನಿವಾರ ಸಂಜೆ ೫-೩೦ ಗಂಟೆಗೆ**

**ಶ್ರೀಮತಿ ಜಯಲಕ್ಷ್ಮಮ್ಮ -ಬಾಪೂ ರಾಮಣ್ಣ ದತ್ತಿ ಕಾರ್ಯಕ್ರಮ**

ಗಮಕ ವಾಚನ : ಶ್ರೀಮತಿ ನಿರ್ಮಲಾ ಪ್ರಸನ್ನ

ವ್ಯಾಖ್ಯಾನ : ಶ್ರೀ ಎ.ವಿ.ಪ್ರಸನ್ನ



**೧೪-೬-೨೦೧೯ ಶುಕ್ರವಾರ ಸಂಜೆ ೫-೩೦ ಗಂಟೆಗೆ**

**"ಅಕ್ಕರಗೊಟ್ಟಿ"-೫೧**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಮರು ಓದು ಹಾಗೂ ಅದರ ಸುಖ

ಚಾಲನೆ ನೀಡುವವರು : **ಶ್ರೀ ಕೆ. ಸತ್ಯನಾರಾಯಣ,** ಖ್ಯಾತ ಲೇಖಕರು



**೧೬-೦೬-೨೦೧೯ ಭಾನುವಾರ ಬೆಳಿಗ್ಗೆ ೧೦-೩೦ ಗಂಟೆಗೆ**

**ವೈಯಾಕರಣಿ ಗರಣಿ ಕೃಷ್ಣಾಚಾರ್ಯ ದತ್ತಿ ಕಾರ್ಯಕ್ರಮ**

**ರಾಷ್ಟ್ರಕವಿಗಳ ಸಾಹಿತ್ಯ ಮಂಥನ ಸರಣಿ ಕಾರ್ಯಕ್ರಮ - ೧**

**ವಿಚಾರ ಸಂಕಿರಣ**

**ಗೋವಿಂದ ಪೈ ಅವರ ಬದುಕು-ಬರಹ**

ಉಪನ್ಯಾಸ : **ಡಾ. ಶಿವಾಜಿ ಜೋಯಿಸ್,** ನಿವೃತ್ತ ಕನ್ನಡ ಪ್ರಾಧ್ಯಾಪಕರು

**ವಿಷಯ : ಗೋವಿಂದ ಪೈ ಅವರ ಜೀವನ ಮತ್ತು ಕಾವ್ಯ**

ಉಪನ್ಯಾಸ : **ಡಾ. ಶ್ರೀನಿವಾಸ ಮೂರ್ತಿ ಜೆ.,** ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು

**ವಿಷಯ : ಗೋವಿಂದ ಪೈ ಅವರ ನಾಟಕ**

ಅಧ್ಯಕ್ಷತೆ ಹಾಗೂ ಪ್ರಬಂಧ ಮಂಡನೆ : **ಡಾ. ತಾಳ್ತಜೆ ವಸಂತಕುಮಾರ್,** ನಿವೃತ್ತ ಕನ್ನಡ ಪ್ರಾಧ್ಯಾಪಕರು

**೧೯-೦೬-೨೦೧೯ ಬುಧವಾರ ಸಂಜೆ ೪-೦೦ ಗಂಟೆಗೆ**

**ಸಾಹಿತ್ಯ ಸಂಚಲನ -೧೧**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

ಮುಖ್ಯ ಅತಿಥಿ: **ಸಾಯಿಲಕ್ಷ್ಮಿ ಎಸ್,** ವಿಶ್ರಾಂತ ಸಹಾಯಕ ನಿರ್ದೇಶಕರು, ಆಕಾಶವಾಣಿ, ಬೆಂಗಳೂರು

**ವಿಷಯ: ಗರಿ ಬಿಚ್ಚಿದ ಬಾನಾಡಿಗಳ ಒಡನಾಡಿಯಾಗಿ ಬಾನುಲಿ**

**೨೩-೦೬-೨೦೧೯ ಭಾನುವಾರ ಬೆಳಿಗ್ಗೆ ೧೦-೩೦ ಗಂಟೆಗೆ**

**ಬಿ.ಎಂ.ಶ್ರೀ.ಪ್ರತಿಷ್ಠಾನದ ೪೦ರ ನಲಿವು**

**ವಿಚಾರ ಸಂಕಿರಣ**

ಉಪನ್ಯಾಸ : **ಡಾ. ಎನ್.ಆರ್. ಲಲಿತಾಂಬ**

ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆಕಾಲೇಜು, ವಿಜಯನಗರ ಬೆಂಗಳೂರು

ವಿಷಯ : ಕನ್ನಡ ಸಂಶೋಧನೆ-ಇತ್ತೀಚಿನ ಒಲವುಗಳು

ಉಪನ್ಯಾಸ : **ಡಾ. ಪಿ. ನಾಗಭೂಷಣ**

ವಿಷಯ : ಹಸ್ತಪ್ರತಿಗಳು - ಆಕರ ಸಂಪತ್ತು

**೩೦-೦೬-೨೦೧೯ ಭಾನುವಾರ ಬೆಳಿಗ್ಗೆ ೧೦-೩೦ ಗಂಟೆಗೆ**

ಗೋವಿಂದ ಜಾಲಿಹಾಳ ದತ್ತಿ ಕಾರ್ಯಕ್ರಮ

**ಕನ್ನಡ ಭಕ್ತಿಗೀತೆಗಳ ಗಾಯನಸ್ಪರ್ಧೆ**

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

## ೨೫–೦೪–೨೦೧೯

### ಶ್ರೀ ಸಿ.ಕೆ.ನಾಗರಾಜರಾವ್, ಶ್ರೀ ಕೆ.ಪಿ.ರಾವ್, ಶ್ರೀ ಕೊರಟಿ ಶ್ರೀನಿವಾಸರಾವ್‌ದತ್ತಿ

ವಿಷಯ : ಸಾಹಿತ್ಯ ಮತ್ತು ಐತಿಹಾಸಿಕತೆ

ಉಪನ್ಯಾಸ : ಡಾ.ಬಿ. ರಾಜಶೇಖರಪ್ಪ

ನಿವೃತ್ತ ಕನ್ನಡ ಪ್ರಾಧ್ಯಾಪಕರು

ಪ್ರಾರಂಭದಲ್ಲಿ ಡಾ.ಆರ್. ಲಕ್ಷ್ಮೀನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನು ಆಡಿ ದತ್ತಿ ದಾನಿಗಳ ಬಗ್ಗೆ ಹಾಗೂ ಕೊರಟಿ ಶ್ರೀನಿವಾಸರಾವ್, ಸಿ.ಕೆ. ನಾಗರಾಜರಾವ್ ಮತ್ತು ಕೆ.ಪಿ.ರಾವ್ ಅವರುಗಳ ಪರಿಚಯ ನೀಡಿದರು. ನಂತರ ಡಾ.ಬಿ. ರಾಜಶೇಖರಪ್ಪ ಅವರ ಪರಿಚಯ ಹೇಳಿ ಎಲ್ಲರನ್ನೂ ಸ್ವಾಗತಿಸಿದರು.

ಕೊರಟಿ ಶ್ರೀನಿವಾಸರಾವ್, ಸಿ.ಕೆ. ನಾಗರಾಜರಾವ್ ಮತ್ತು ಕೆ.ಪಿ.ರಾವ್ ದತ್ತಿ ಕಾರ್ಯಕ್ರಮದಲ್ಲಿ ಏರ್ಪಾಡಾಗಿದ್ದ 'ಸಾಹಿತ್ಯ ಮತ್ತು ಐತಿಹಾಸಿಕತೆ' ಅತ್ಯಂತ ಪ್ರಸ್ತುತವಾದ ವಿಷಯವಾಗಿತ್ತು.

ರಾಜಶೇಖರಪ್ಪನವರು ತಮ್ಮ ಉಪನ್ಯಾಸದಲ್ಲಿ ಮುಖ್ಯವಾಗಿ ಚಿತ್ರದುರ್ಗದ ಇತಿಹಾಸವನ್ನು ಆಧರಿಸಿ ರಚಿಸಿದ ತ.ರಾ.ಸು. ಅವರ 'ದುರ್ಗಾಸ್ತಮಾನ, 'ಸಿಡಿಲಮೊಗ್ಗು', ಐತಿಹಾಸಿಕ ಕಾದಂಬರಿಯಲ್ಲದಿದ್ದರೂ ಐತಿಹಾಸಿಕ ಕಾದಂಬರಿಯೆಂಬ ಭಾಸ ಉಂಟು ಮಾಡುವ 'ಹಂಸಗೀತೆ' ಮೊದಲಾದವುನ್ನು, ಗಿರೀಶರ ತಲೆದಂಡ, ಶಿವ ಪ್ರಕಾಶರ ಮಹಾಚೈತ್ರ ಮೊದಲಾದ ನಾಟಕಗಳನ್ನು ವಿಸ್ತಾರವಾಗಿ ಪ್ರಸ್ತಾಪಿಸಿದರು. ಇತಿಹಾಸದ ಒಂದು ಎಳೆಯನ್ನು ಹಿಡಿದು–ಕೊಂಡು ಅದರ ಮೇಲೆ ತಮ್ಮ ತಮ್ಮ ಕಲ್ಪನೆಯ ಜಾಲವನ್ನು ನೇಯ್ದವರೇ ಹೆಚ್ಚು. ಚಿತ್ರದುರ್ಗದ ಪಾಳ್ಳೇಗಾರ ಮದಕರಿನಾಯಕನಿಗೂ ಮದಿಸಿದ ಕರಿಗೂ ಅಂಥ ಯಾವ ಸಂಬಂಧವೂ ಇಲ್ಲ. ಆದರೆ ಅವನು ಮದಿಸಿದ ಆನೆಯ ಹಿಡಿದು ಅದರ ಮದವನ್ನು ಅಡಗಿಸುತ್ತಿರುವ ರೀತಿಯ ಚಿತ್ರಗಳು, ವಿಗ್ರಹಗಳು ಸ್ಥಾಪನೆಯಾಗಿವೆ. ಹೀಗೆ ಇತಿಹಾಸದ ಹೆಸರಿನಲ್ಲಿ ಸ್ವಕಪೋಲ ಕಲ್ಪನೆಗಳು, ದಂತಕಥೆಗಳೇ ಹೆಚ್ಚು. ಏನೇ ಅಗಲಿ ಐತಿಹಾಸಿಕ ಕಾದಂಬರಿಕಾರರು ಇತಿಹಾಸದ ಪ್ರಮುಖ ವಾಸ್ತವ ಸಂಗತಿಗಳಿಗೆ ಧಕ್ಕೆ ಬರದಂತೆ ತಮ್ಮ ಕಲ್ಪನೆಯನ್ನು ಬೆಳೆಸಿ ಕೃತಿ ರಚಿಸುವುದು ಸ್ವಾಗತಾರ್ಹ ಎಂದರು. ಹೀಗೆ ಅನೇಕ ಪ್ರಮುಖ ವಿಷಯಗಳನ್ನು ಪ್ರಸ್ತಾಪಿಸಿ ಚೇತೋಹಾರಿಯಾಗಿ ಉಪನ್ಯಾಸ ನೀಡಿದರು.

ಶ್ರೀ ರವೀಂದ್ರನಾಥ ಎಲ್ಲರಿಗೂ ವಂದಿಸಿದರು.

## ೨೯–೦೪–೨೦೧೯

### "ಅಕ್ಕರಗೊಟ್ಟಿ"–೪೯

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ :ಷಟ್ಪದಿ ಕಾವ್ಯಗಳ ಸೂತ್ರ ಪದ್ಯಗಳು

ಚಾಲನೆ ನೀಡುವವರು :ಪ್ರೊ. ವೀರೇಂದ್ರಕುಮಾರ್

ಲೌಕಿಕ : ಆಗಮಿಕ ಪರಿಕಲ್ಪನೆಗಳ ಮರುಪರಿಶೀಲನೆ.

ಪ್ರಾರಂಭದಲ್ಲಿ ಡಾ.ಆರ್.ಲಕ್ಷ್ಮೀನಾರಾಯಣ ಅವರು ಪ್ರಸ್ತಾವಿಕ ನುಡಿಗಳನ್ನು ಆಡಿ ಪ್ರೊ. ವೀರೇಂದ್ರಕುಮಾರ್ ಅವರನ್ನು ಪರಿಚಯಿಸಿ ಎಲ್ಲರಿಗೂ ಸ್ವಾಗತ ಮಾಡಿದರು.ಈ ಸಲದ ಅಕ್ಕರಗೊಟ್ಟಿಗೆ ಪ್ರೊ.ವೀರೇಂದ್ರಕುಮಾರ್ ಅವರು ಆರಿಸಿಕೊಂಡದ್ದು ಪಂಪ ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಘೋಷಿಸಿದ 'ಬೆಳಗುವೆನಿಲ್ಲಿ ಲೌಕಿಕಮಂ ಅಲ್ಲಿ ಜಿನಾಗಮಮಂ" ಎಂಬ ಪ್ರಸಿದ್ಧ ಘೋಷಣೆಯನ್ನು. ಆದಿಪುರಾಣ ಹೇಳಿ ಕೇಳಿ ತೀರ್ಥಂಕರ ಪುರಾಣವಾದ್ದರಿಂದ ಅದರಲ್ಲಿ ಬೆಳಗಿರುವುದು ಜೈನ ಧರ್ಮದ ವಿಷಯವನ್ನು; ಇನ್ನು ವಿಕ್ರಮಾರ್ಜುನ ವಿಜಯದ ವಸ್ತು ವ್ಯಾಸಭಾರತದ ಕೌರವ ಪಾಂಡವರ ದಾಯಾದಿ ದ್ವೇಷದ ಕಥೆಯಾದ ಮಹಾಭಾರತದ ವಿಷಯವನ್ನು ಇದುವರೆಗೆ ಸಾಮಾನ್ಯವಾಗಿ ನಂಬಿಕೊಂಡು ಬಂದಿರುವುದು. ಮಾನ್ಯ ವೀರೇಂದ್ರಕುಮಾರ್ ಅವರು ಅದಕ್ಕಿಂತ ಭಿನ್ನವಾದ ವಿಚಾರವನ್ನು ಮುಂದಿಟ್ಟರು.



ಕನ್ನಡ ಸಾಹಿತ್ಯ ಪ್ರಾರಂಭವಾಗುವುದು ಚಂಪುಕಾವ್ಯಗಳಿಂದ. ಚಂಪೂ ಕಾವ್ಯವನ್ನು ಆರಂಭದಲ್ಲಿ ರಚಿಸಿದ ಜೈನ ಕವಿಗಳು ಲೌಕಿಕ : ಆಗಮಿಕ ಎಂದು ಕಾವ್ಯಪರಂಪರೆಯನ್ನು ಹುಟ್ಟುಹಾಕಿದ್ದಾರೆ. ಪಂಪಪೂರ್ವ ಕವಿಗಳಲ್ಲಿ ಈ ಸಂಪ್ರದಾಯ ಕಂಡುಬರುವುದು ಸರಿಯಷ್ಟೆ.ಇದುವರೆವಿಗೂ ನಾವು ಲೌಕಿಕವೆಂದರೆ ಮನುಷ್ಯ ಕಾವ್ಯ, ಆಗಮಿಕವೆಂದರೆ ಮನುಷ್ಯ–ದೈವ ಸಂಬಂಧಗಳನ್ನು ನಿರೂಪಿಸುವ ಸ್ಥೂಲವಾಗಿ ಪರಿಗಣಿಸಿರುವುದು ಕಂಡುಬರುತ್ತದೆ. ಲೌಕಿಕದಲ್ಲಿ ಆಗಮಿಕವೂ ಆಗಮಿಕ ಕಾವ್ಯಗಳನ್ನು ಲೌಕಿಕವೂ ಹಾಸುಹೊಕ್ಕಾಗಿರುವುದನ್ನು ವಿದ್ವಾಂಸರು ಗಮನಿಸಿ ಚರ್ಚಿಸಿದ್ದಾರೆ.

ಲೌಕಿಕ: ಆಗಮಿಕ ಎಂಬ ಪರಿಕಲ್ಪನೆಗಳೂ ಜೈನ ಧಾರ್ಮಿಕ ದೃಷ್ಟಿಗಳಾಗಿವೆ. ರತ್ನಾಕರನಲ್ಲಿ "ವ್ಯವಹಾರ ನಿಶ್ಚಯ ಅರಿದು ತನ್ನಾತ್ಮ ತತ್ವವ ನಮ್ಮಿ ನಿಜವಗಾಣದು" ಎಂಬ ಮಾತು ಬರುತ್ತದೆ. ವ್ಯಾವಹಾರಿಕ ಸತ್ಯ ಹಾಗೂ ನಿಶ್ಚಯ ಜ್ಞಾನಗಳನ್ನು ಅರಿತು ಆತ್ಮ ತತ್ವವನ್ನು ನಂಬಿ ಸತ್ಯದ ಬಹುಮುಖತೆಯನ್ನು ಕಂಡು ಕೊಳ್ಳಬೇಕೆಂಬ ಆಶಯ ರತ್ನಾಕರನಲ್ಲಿ ಇದ್ದಂತೆ ಕಾಣುತ್ತದೆ. ಈ ವ್ಯವಹಾರ; ನಿಶ್ಚಯ ಜ್ಞಾನಗಳೇ ಜೈನಕವಿಗಳಲ್ಲಿ ಲೌಕಿಕ: ಆಗಮಿಕ ಪರಿಕಲ್ಪನೆಗೆ ಕಾರಣವಾಗಿರಬಾರದೇಕೆ? ಇದಕ್ಕಿಂತ ಪ್ರಮುಖ ಅಂಶವೆಂದರೆ ಜೈನಧರ್ಮದ ಪ್ರಮುಖ ತಾಂತ್ರಿಕ ಅಂಶ ಅನೇಕಾಂತವಾದದಲ್ಲಿದೆ. ಸತ್ಯ ಏಕಮುಖವಾದದ್ದಲ್ಲ ಬಹುಮುಖವಾದದ್ದು. ಹಾಗೂ ಸ್ಯಾದ್ವಾದದ ದೃಷ್ಟಿಕೋನದಲ್ಲಿ ಮುಖ್ಯವಾಗಿ 'ಬಹುತ್ವ' ಮತ್ತು ಸಹಿಷ್ಣುತೆಗಳನ್ನು ಕಾಣುತ್ತೇವೆ. ಈ ತಾತ್ರಿಕ ಅಂಶ. ಪ್ರಧಾನವಾದುದರಿಂದ ಬಹುತ್ವವನ್ನೂ ಒಪ್ಪುವ ಜೈನದೃಷ್ಟಿಯಲ್ಲಿ ಲೌಕಿಕ–ಆಗಮಿಕ ಕಾವ್ಯಗಳು ಹೊಸ ಅರ್ಥವನ್ನು ಪಡೆದುಕೊಳ್ಳುತ್ತವೆ.

ಚರ್ಚೆಯಲ್ಲಿ ಭಾಗವಹಿಸಿದ ಆರ್.ಲಕ್ಷ್ಮೀನಾರಾಯಣ ಅವರು ಲೌಕಿಕ ಎಂದರೆ ಜೈನರ ದೃಷ್ಟಿಯಲ್ಲಿ ಭಾರತದ ಕಥೆ ಜೈನ ಧರ್ಮೇತರವಾದದ್ದು ಎಂಬ ಅರ್ಥವೂ ಇಂಗಿತವಾಗಿರಬೇಕು ಎಂದು ಹೇಳಿದರು.

ಶ್ರೀ ಗುರುಪ್ರಸಾದ್ ಅವರು ವಂದನಾರ್ಪಣೆ ಮಾಡಿದರು.

## ೦೮ –೦೫–೨೦೧೯

### "ಅಕ್ಕರಗೊಟ್ಟಿ"–೫೦

**ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ**

ವಿಷಯ : ಸಮಾಜ ಶಾಸ್ತ್ರ ಮತ್ತು ನಮ್ಮ ಅನುಭವ

ಚಾಲನೆ ನೀಡಿದವರು: ಡಾ. ಮಹೇಶ್ ಕುಮಾರ್. ಸಿ.ಎಸ್.

ನ್ಯಾಷನಲ್ ಕಾಲೇಜು, ಬೆಂಗಳೂರು

ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಡಾ.ಸಿ.ಎಸ್. ಮಹೇಶ್ ಕುಮಾರ್ ಅವರನ್ನು ಸಭೆಗೆ ಪರಿಚಯಿಸಿ, ಸ್ವಾಗತಿಸಿದರು.

ಭಾರತ ದೇಶಕ್ಕೂ ಮತ್ತು ಇಡೀ ಪ್ರಪಂಚಕ್ಕೂ ಒಂದೇ ಸಮಾಜ ಶಾಸ್ತ್ರವೇ ಸಾಕೇ? ಭಾರತ ದೇಶಕ್ಕೆ ತನ್ನದೇ ಆದ ಸಮಾಜ ಶಾಸ್ತ್ರವಿರಬಾರದೇಕೆ? ನಮ್ಮದೇ ಆದ ಸಮಾಜ ಶಾಸ್ತ್ರ ಹೊಂದಲು ಭಾಷಾಂತರದ ಸಮಸ್ಯೆಯಿದೆಯೇ ಅಥವಾ ಅನುಭವದ ಸಮಸ್ಯೆಯಿದೆಯೇ. ಹೀಗೆ ಚರ್ಚೆಯ ವಿಷಯವನ್ನು ಪ್ರಾರಂಭಿಸಿ, ತರಗತಿಗಳಲ್ಲಿ ಬೋಧನೆಯ ಸಮಯದಲ್ಲಿ ತಮಗೆ ತೊಡಕಾಗಿ ಬಂದ ಕೆಲವು ಸಮಸ್ಯೆಗಳನ್ನು ವಿವರಿಸಿ, ಚರ್ಚೆಯಲ್ಲಿ ಎಲ್ಲರೂ ಭಾಗವಹಿಸಿ, ಅಭಿಪ್ರಾಯಗಳನ್ನು ತೆಗೆದುಕೊಂಡು ಚರ್ಚೆಯ ಒಟ್ಟು ಸಾರಾಂಶವನ್ನು ಈ ರೀತಿ ಕ್ರೋಡೀಕರಿಸಿದೆ.

ಕನ್ನಡ ಮತ್ತು ಸ್ಥಳೀಯ ಭಾಷೆಗಳಲ್ಲಿ ಸಮಾಜ ವಿಜ್ಞಾನಗಳು ಇಲ್ಲದೇ ಇರುವುದಕ್ಕೂ ಮತ್ತು ಅವು ನಮ್ಮ ಸಮಾಜದ ಜೊತೆಗೆ ಜೈವಿಕ ಸಂಬಂಧ ಹೊಂದಿಲ್ಲದೇ ಇರುವುದಕ್ಕೂ ಕಾರಣವೆಂದರೆ, ಅದು ನಮ್ಮ ಭಾಷೆಗಳಲ್ಲಿನ ಸಂಕುಚಿತೆಯಲ್ಲ. ಬದಲಾಗಿ ಪಾಶ್ಚಿಮಾತ್ಯ ಕಣ್ಣಿಂದ ನಾವು ನಮ್ಮನ್ನು ಗ್ರಹಿಸಿಕೊಳ್ಳಲು ಪಡುತ್ತಿರುವ ಪಡಿಪಾಟಲಿನಿಂದ. ಪಾಶ್ಚಿಮಾತ್ಯರ ಕೊಡುಗೆಯಾಗಿ ಬಂದ ಸಮಾಜ ವಿಜ್ಞಾನಗಳು ನಮ್ಮ ಸಮಾಜದ ಬಗೆಗೆ ಹೊಂದಿದ್ದ ಪೂರ್ವಗ್ರಹಿಕೆಗಳು ಮತ್ತು ನಮ್ಮನ್ನು ವರ್ಣಿಸಲು ಬಳಸಿದ ಪರಿಭಾಷೆಗಳು ಅದಕ್ಕೆ ತನ್ನ ಸಮಾಜದ ಅನುಭವದಿಂದ ದತ್ತವಾಗಿದ್ದವು. ಯಾವುದೇ ಪರಿಭಾಷೆಯು ಸಾಮಾಜಿಕ ಅನುಭದ ಉತ್ಪನ್ನವಾಗಿರುತ್ತದೆ. ಅದು ಆಸಮಾಜದ ಅನುಭವದ ಅರ್ಥವಲಯದಲ್ಲಿ ಮಾತ್ರ ಅರ್ಥವನ್ನು ಪಡೆಯುತ್ತವೆ ಮತ್ತು ನೀಡುತ್ತವೆ. ಆದರೆ ಪಾಶ್ಚಿಮಾತ್ಯರು ತಮಗಿಂತ ಭಿನ್ನವಾದ ಸಮಾಜಗಳನ್ನು ತಮ್ಮದೇ ಆದ ಇನ್ನೊಂದು ರೂಪವಾಗಿ ಭಾವಿಸಿ.ತಮ್ಮ ಸಮಾಜದಲ್ಲಿ ರೂಪುಗೊಂಡ ಪರಿಭಾಷೆಯ ಚೌಕಟ್ಟಿನಲ್ಲಿ ಈ ಸಮಾಜವನ್ನು ಚಿತ್ರಿಸಿತು.ಅದುವೇ ಸಮಾಜ ವಿಜ್ಞಾನಗಳ ಜ್ಞಾನಗಳಾಗಿ ಪ್ರಸರಿತವಾದ್ದರಿಂದ, ಅವು ನಮ್ಮ ನೈಜ್ಯ ಚಿತ್ರಗಳಾಗಿರದೆ, ನಮ್ಮ ಅನುಭವಕ್ಕೆ ಅವು ದಕ್ಕದೇ ಹೋದವು.ಪಾಶ್ಚಿಮಾತ್ಯರ ಪರಿಭಾಷೆ ಮತ್ತು ನಮ್ಮ ಅನುಭವ ಬೇರೆ ಬೇರೆಯಾಗಿ ನಮಗೆ ಗೊಂದಲವನ್ನು ಉಂಟುಮಾಡಿದೆ.ಈ ಗೊಂದಲವು ನಮಗೆ ನಮ್ಮ ಅನುಭವವನ್ನು ನಾವೇ ದಕ್ಕಿಸಿಕೊಳ್ಳದಂತಹ ಪರಿಸ್ಥಿಯನ್ನು ಉಂಟುಮಾಡಿದೆ.

ಸಮಾಜ ವಿಜ್ಞಾನಗಳ ಕೆಲಸ ಸಮಾಜಿಕ ಅನುಭವವನ್ನು ಹಿಡಿಯುವುದೇ ಆಗಿರುವುದರಿಂದ ನಮ್ಮ ಅನುಭವ ನೆಲೆಯಲ್ಲಿ ಪರಿಭಾಷೆಗಳನ್ನು ರೂಪಿಸಬೇಕಿದೆ.ಈಗಾಗಲೇ ಅನೇಕ ಪರಿಭಾಷೆಗಳು ವಸಹಾತು ಶಾಹಿಯ ಕಾರಣದಿಂದ ನಮಗೆ ರೂಢಿಯಾಗಿರುವುದರಿಂದ ಅವುಗಳ ಒಳಗಿನ ಪೂರ್ವಗ್ರಹಿಕೆಯನ್ನು ನಾವು ಪರಿಶೀಲಿಸಬೇಕಿದೆ.ಈ ಪರಿಶೀಲನೆಯನ್ನು ನಮ್ಮ ಅನುಭವದ ಹಿನ್ನಲೆಯಲ್ಲಿ ತೌಲನಿಕವಾಗಿ ಪರಿಶೀಲಿಸಿ ನಮ್ಮ ಸಮಾಜಕ್ಕೆ ಜೈವಿಕವಾದ ಸಮಾಜ ವಿಜ್ಞಾನಗಳನ್ನು ನಾವು ರೂಪಿಸುವ ಅನಿವಾರ್ಯತೆ ಇದೆ.

ಚರ್ಚೆಯಲ್ಲಿ ಡಾ.ಆರ್.ಲಕ್ಷ್ಮೀನಾರಾಯಣ, ಡಾ. ವಿಜಯಾ ಸುಬ್ಬರಾಜ್, ಶ್ರೀ ಡಿ.ನಂ ವೆಂಕಟರಮಣಯ್ಯ, ಶ್ರೀ ಗಂಗಾಧರ, ಶ್ರೀ ರವೀಂದ್ರನಾಥ ಮುಂತಾದವರು ಭಾಗವಹಿಸಿದರು.

ಶ್ರೀ ಬಿ.ಆರ್.ರವೀಂದ್ರನಾಥ್ ಅವರು ವಂದನೆ ಸಲ್ಲಿಸಿದರು.

## ೨೨.೦೪.೨೦೧೯
## ಸಾಹಿತ್ಯ ಸಂಚಲನ – ೯

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ
ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ
ಮುಖ್ಯ ಅತಿಥಿ: ಡಾ.ಎಚ್.ಎಸ್.ಎಮ್. ಪ್ರಕಾಶ್




ವಿಷಯ: ಪ್ರಕೃತಿ ವಿಕೋಪಗಳಿಗೆ ಜ್ವಾಲಾಮುಖಿಗಳು ಕಾರಣವೇ?

ಇತ್ತೀಚಿಗೆ ಕೇರಳ ಮತ್ತು ಕೊಡಗು ಜಿಲ್ಲೆಯಲ್ಲಿ ಸಂಭವಿಸಿದ ಮಳೆ ಮತ್ತು ಪ್ರವಾಹಗಳು ಮತ್ತೊಮ್ಮೆ ಮರುಕಳಿಸಬಹುದೇ? ಅದಕ್ಕಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುವ ಅಗತ್ಯ ವಿದೆಯೇ ಎಂಬ ಪ್ರಶ್ನೆಗಳ ಮೂಲಕ ಸಭಿಕರಲ್ಲಿ ಆತಂಕ ಮತ್ತು ಕುತೂಹಲವನ್ನು ಜಾಗೃತಿಗೊಳಿಸಿದ್ದು ಖ್ಯಾತ ಭೂಗರ್ಭತಜ್ಞ ಡಾ.ಎಚ್.ಎಸ್.ಎಮ್ ಪ್ರಕಾಶ್‌ರವರು. ಕರ್ನಾಟಕ ಲೇಖಕಿಯರ ಸಂಘ, ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದೊಂದಿಗೆ ಆಯೋಜಿಸುತ್ತಿರುವ ಸಾಹಿತ್ಯ ಸಂಚಲನ ಸರಣಿ ಕಾರ್ಯಕ್ರಮದ ಹತ್ತನೆಯ ಕಾರ್ಯಕ್ರಮದಲ್ಲಿ 'ಪ್ರಕೃತಿ ವಿಕೋಪಗಳಿಗೆ ಜ್ವಾಲಾಮುಖಿಗಳು ಕಾರಣವೇ?' ಎನ್ನುವ ವಿಷಯವಾಗಿ ಉಪನ್ಯಾಸ ನೀಡಿದ ಪ್ರಕಾಶ್‌ರವರು ಅಂದು ಜ್ವಾಲಾಮುಖಿಗಳು ಪ್ರಪಂಚದ ಎಲ್ಲ ಕಡೆಯೂ ಇವೆ. ಅವು ಎಲ್ಲೋ ಒಂದು ಕಡೆ ಸ್ಫೋಟಗೊಂಡಾಗ ಅದರ ಪರಿಣಾಮ ಮತ್ತೆಲ್ಲೋ ಕಾಣಬರುವ ಸಾಧ್ಯತೆಗಳಿರುತ್ತವೆ. ಭೂಗರ್ಭ ವಿಜ್ಞಾನಿಗಳು ಜ್ವಾಲಾಮುಖಿಗಳ ಬಗ್ಗೆ ಸಾಕಷ್ಟು ಅಧ್ಯಯನ ಮಾಡಿದ್ದಾರೆ; ಅವು ಘಟಿಸುವ ಬಗ್ಗೆ ಮುನ್ಸೂಚನೆಯನ್ನೂ ಕೊಡಬಲ್ಲರು. ಆದರೆ ನಿಖರವಾದ ಸಮಯವನ್ನು ಮುನ್ಸೂಚಿಸುವುದು ಕಷ್ಟ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದರು.ಇತ್ತೀಚಿಗೆ ದೆಹಲಿಯಲ್ಲಿ ಸಂಭವಿಸಿದ ಧೂಳಿನ ಸುನಾಮಿ ಮತ್ತು ಪ್ರಪಂಚದ ನಾನಾ ಕಡೆ ಕಂಡಿರುವ ಚಂಡಮಾರುತ, ಭೂಕಂಪ ಇತ್ಯಾದಿಗಳ ಬಗ್ಗೆಯೂ ಸಾಕಷ್ಟು ವಿಷಯಗಳನ್ನು ತಿಳಿಸಿದರು. ತಮ್ಮ ಉಪನ್ಯಾಸಕ್ಕೆ ಪೂರಕವಾಗಿ ವಿವಿಧ ಪ್ರಕೃತಿ ವಿಕೋಪಗಳ ವಿಡಿಯೋ ಚಿತ್ರಗಳನ್ನು ಪ್ರದರ್ಶಿಸಿ ಪ್ರೇಕ್ಷಕರಿಗೆ ವಿಷಯಗಳನ್ನು ಸ್ಪಷ್ಟಪಡಿಸಿದರು.

ಅನಂತರ ಜರುಗಿದ ಕವಿಗೋಷ್ಠಿಯ ಅಧ್ಯಕ್ಷತೆ ವಹಿಸಿದವರು ಪ್ರಖ್ಯಾತ ಕವಯತ್ರಿ ಉಷಾದೇವಿಯವರು.ಕುಲಶೇಖರಿ ಎಂಬ ಕಾವ್ಯನಾಮದಲ್ಲಿ ಚಿರಪರಿಚಿತರಾಗಿರುವ ಉಷಾರವರು ಕಲೇಸಂನ ಸ್ಥಾಪಕ ಸದಸ್ಯರಲ್ಲೊಬ್ಬರು. ಕವಿಗೋಷ್ಠಿಯಲ್ಲಿ ಕವಯತ್ರಿಯರಾದ ಭಾರತಿ ಬಿ.ವಿ, ಸಂಧ್ಯಾ ರಾಣಿ, ಆರತಿ ಘಟಿಕಾರ್, ಗಾಯತ್ರಿ ರಾಮಣ್ಣ, ಅಭಯಲಕ್ಷ್ಮೀ, ಸುಲೋಚನಾ ಹುಲ್ಲಳ್ಳಿ, ಪ್ರೊ, ಶ್ರೀಲತಾ ಎ, ಸರಸ್ವತಿ ನಟರಾಜ್, ಗಿರಿಜಾ ರಾಜ್, ಮೈತ್ರೇಯಿ, ಭಾಗ್ಯ–ರೇಖಾ ಸಿ.ಎಸ್, ಡಾ.ಎಸ್.ಜಿ. ಮಾಲತಿ ಶೆಟ್ಟಿ, ಸುನಂದಾ ಎಸ್ ಮತ್ತು ನಂದಿನಿ ಚುಕ್ಕೆಮನೆ ಕವನ ವಾಚಿಸಿದರು. ಉಷಾದೇವಿಯವರು ವಿಭಿನ್ನ ವಿಷಯಗಳಲ್ಲಿ ಸೃಜನಾತ್ಮಕ ಕವನಗಳನ್ನು ರಚಿಸಿ ವಾಚಿಸಿದ ಕವಯತ್ರಿಯರನ್ನು ಅಭಿನಂದಿಸಿದರು.ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷರಾದ ವನಮಾಲಾ ಸಂಪನ್ನಕುಮಾರರವರು ಮಾಹಿತಿಪೂರ್ಣ ಉಪನ್ಯಾಸ ನೀಡಿದ ಡಾ.ಎಚ್.ಎಸ್.ಎಮ್ ಪ್ರಕಾಶ್‌ರವರಿಂದ ಮತ್ತಷ್ಟು ವಿಷಯಗಳನ್ನು ತಿಳಿದುಕೊಳ್ಳುವುದಕ್ಕಾಗಿ ಮತ್ತೊಮ್ಮೆ ಅವಕಾಶ ನೀಡುವುದು ಅವಶ್ಯಕ. ವಿಜ್ಞಾನ ಮತ್ತು ಸೃಜನಾತ್ಮಕ ಸಾಹಿತ್ಯಗಳೆರಡೂ ಒಂದಕ್ಕೊಂದು ಪೂರಕ ಎಂದು ನುಡಿದರು.

ಆಸಕ್ತಿಯಿಂದ ಕವಿಗೋಷ್ಠಿಯಲ್ಲಿ ಭಾಗವಹಿಸಿದ ಕವಯತ್ರಿಯರಿಗೂ ಅಭಿನಂದನೆ ಸಲ್ಲಿಸಿದರು. ನಾಗರತ್ನ ಚಂದ್ರಶೇಖರ್‌ರವರ ನಿರೂಪಣೆಯಲ್ಲಿ ಜರುಗಿದ ಕಾರ್ಯಕ್ರಮದಲ್ಲಿ ಡಾ.ಎಚ್.ಎಸ್.ಎಮ್.ಪ್ರಕಾಶ್‌ರವರ ಪರಿಚಯವನ್ನು ರೇಣುಕಾ ದೇಸಾಯಿ ಮತ್ತು ಕುಲಶೇಖರಿಯವರ ಪರಿಚಯವನ್ನು ಜಿ.ವಿ.ನಿರ್ಮಲ ಮಾಡಿಕೊಟ್ಟರು.

## ‘ಕರ್ನಾಟಕ ಲೋಚನ’ ನೂತನ ಸಂಪಾದಕರು

ನಿವೃತ್ತ ಪ್ರಾಧ್ಯಾಪಕ ಹಾಗೂ ಖ್ಯಾತ ಲೇಖಕ ಡಾ.ವೀರೇಂದ್ರಕುಮಾರ್ ಅವರನ್ನು ಬಿಎಂಶ್ರೀ ಪ್ರತಿಷ್ಠಾನ ಪ್ರಕಟಿಸುತ್ತಿರುವ ‘ಕರ್ನಾಟಕ ಲೋಚನ’ ವಿದ್ವತ್ ಪತ್ರಿಕೆಯ ಸಂಪಾದಕರನ್ನಾಗಿ ೨೦೧೯ರ ಜನವರಿಯಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ. ಅವರಿಗೆ ಹೊಂಗನಸು ಅಭಿನಂದಿಸುತ್ತದೆ.

೨೦೧೬ರ ಜನವರಿಯಿಂದ ೨೦೧೮ರ ಡಿಸೆಂಬರ್ ವರೆಗೆ ‘ಕರ್ನಾಟಕ ಲೋಚನ’ ದ ಸಂಪಾದಕರಾಗಿ ಸೇವೆ ಸಲ್ಲಿಸಿದ ಡಾ. ಹೆಚ್. ಎನ್. ಮುರಳೀಧರ ಅವರು ನೀಡಿದ ಅಪಾರ ಸೇವೆಯನ್ನು ಪ್ರತಿಷ್ಠಾನವು ದಾಖಲಿಸಿ ಅವರಿಗೆ ಅಭಾರಿಯಾಗಿರುತ್ತದೆ.

### ಡಾ. ಬಿ. ರಾಜಶೇಖರಪ್ಪ

ಶಾಸನ, ಇತಿಹಾಸ ಸಂಶೋಧನೆಯಲ್ಲಿ ಪ್ರಸಿದ್ಧರಾಗಿರುವ ಡಾ. ಬಿ. ರಾಜಶೇಖರಪ್ಪನವರು ಮೂಲತಃ ಚಿತ್ರದುರ್ಗ ಜಿಲ್ಲೆಯವರು.ಎಂ.ಎ ಪದವಿಯಲ್ಲಿ ರ್‍ಯಾಂಕ್. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ‘ತರಂಗ’ ಎಂಬ ಕವನ ಸಂಕಲನ ಪ್ರಕಟಣೆ, ವಿವಿಧ ಸರ್ಕಾರೀ ಕಾಲೇಜುಗಳಲ್ಲಿ ೩೪ ವರ್ಷಗಳ ಕಾಲ, ಅಧ್ಯಾಪಕ, ಪ್ರಾಧ್ಯಾಪಕ ಮತ್ತು ಪ್ರಿನ್ಸಿಪಾಲರಾಗಿ ಸೇವೆಸಲ್ಲಿಸಿ ನಿವೃತ್ತರಾಗಿದ್ದಾರೆ. ಶಾಸನ ಕ್ಷೇತ್ರದಲ್ಲಿ ನಿರಂತರವಾಗಿ ಕ್ರಿಯಾಶೀಲರಾಗಿ ಅನೇಕ ಹೊಸ ಶಾಸನಗಳನ್ನು ಪತ್ತೆ ಹಚ್ಚಿರುವುದಲ್ಲದೆ ಹಿಂದೆ ತಪ್ಪಾಗಿ ಓದಲಾಗಿದ್ದ ಹಲವು ಶಾಸನಗಳನ್ನು ಮರು ಓದಿಗೆ ಒಳಪಡಿಸಿ ಅವುಗಳ ಬಗ್ಗೆ ಹೊಸ ಬೆಳಕು ಚೆಲ್ಲಿದ್ದಾರೆ.

ಚಿತ್ರ ದುರ್ಗದ ಶಾಸನಗಳ ಬಗ್ಗೆ ದಿ. ಡಾ. ಎಂ.ಎಂ.ಕಲ್ಬುರ್ಗಿಯವರ ಮಾರ್ಗದರ್ಶನದಲ್ಲಿ ಆಳವಾದ ಅಧ್ಯಯನ ನಡೆಸಿ ಪಿಎಚ್.ಡಿ ಪದವಿ ಪಡೆದಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಶ್ರೇಷ್ಠ ಸಂಶೋಧನ ಪುಸ್ತಕ ಬಹುಮಾನ, ಕರ್ನಾಟಕ ಇತಿಹಾಸ ಅಕಾಡೆಮಿಯ ಡಾ. ಬಾ. ರಾ. ಗೋಪಾಲ್ ಪ್ರಶಸ್ತಿ, ಸಂಶೋಧನ ಶ್ರೀ ಪ್ರಶಸ್ತಿ ಗಳು ಬಂದಿರುತ್ತವೆ. ಇವಲ್ಲದೆ, ಮಹಾಲಿಂಗರಂಗ ಪ್ರಶಸ್ತಿ, ರ‍್ರಾಷ್ಟ್ರೀಯ ಹಂಡೆಶ್ರೀ ಪ್ರಶಸ್ತಿ, ಕುಮಾರಶ್ರೀ ಪ್ರಶಸ್ತಿ, ಮುರುಘಾಶ್ರೀ ಪ್ರಶಸ್ತಿಗಳು ಸಹ ಬಂದಿವೆ. ಹರಿಹರ ತಾಲ್ಲೂಕಿನ ಮೊದಲ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ, ಚಿತ್ರದುರ್ಗ ಜಿಲ್ಲಾ ಸಮ್ಮೇಳನಾಧ್ಯಕ್ಷತೆ, ಒಡಿಶಾ ರಾಜ್ಯದ ಕಟಕ್ ನಲ್ಲಿ ನಡೆದ ಸ್ಥಳನಾಮ ಅಧ್ಯಯನ ಪರಿಷತ್ತಿನ ಸಮ್ಮೇಳನದ ಸರ್ವಾಧ್ಯಕ್ಷತೆ ಇವೆಲ್ಲಾ ಅವರ ಸಾಧನೆಗೆ ಒಲಿದು ಬಂದ ಗೌರವಗಳು. ಇತ್ತೀಚೆಗೆ ಬಾದಾಮಿಯಲ್ಲಿ ನಡೆದ ಇತಿಹಾಸ ಅಕಾಡೆಮಿಯ ೩೨ನೇ ಸಮ್ಮೇಳನದ ಸರ್ವಾಧ್ಯಕ್ಷತೆಯ ಗೌರವ ಅವರದಾಗಿದೆ.

### ಡಾ. ಮಹೇಶ್ ಕುಮಾರ್ ಸಿ. ಎಸ್

**ಶಿಕ್ಷಣ:**

–ಎಂ. ಎ ಸಮಾಜಶಾಸ್ತ್ರ,

– ಪಿಎಚ್‌ಡಿ: ಬೆಲ್ಜಿಯಂನ ಘೆಂಟ್ ಯುನಿವರ್ಸಿಟಿಯ ಫೆಲೋಶಿಫ್ ನೊಂದಿಗೆ, ವಿಷಯ ‘ಕರ್ನಾಟಕದ ದರ್ಗಾ ಸಂಪ್ರದಾಯಗಳು’

– ಯುಜಿಸಿ ಯಿಂದ ನೀಡಲಾಗುವ೨೦೧೫–೧೮ ಸಾಲಿನ ‘ಪೋಸ್ಟ್ ಡಾಕ್ಟ್ರಲ್ ಫೆಲೋ’ ಆಗಿ ಆಯ್ಕೆ.

ವೃತ್ತಿ:ಬಸವನಗುಡಿ ನ್ಯಾಷನಲ್ ಕಾಲೇಜಿನ ಸಮಾಜ ಶಾಸ್ತ್ರದ ಸ್ನಾತ–ಕೋತ್ತರ ಕೇಂದ್ರದಲ್ಲಿ ಅಧ್ಯಾಪಕ

ಬರವಣಿಗೆ: ಪ್ರಕಟಿತ ಪುಸ್ತಕಗಳು–೨

ಆಸಕ್ತಿ ಮತ್ತು ಲೇಖನಗಳು: ವಿದಿ ಆಚರಣೆ, ಸೆಕ್ಯುಲರಿಸಂ, ಇಸ್ಲಾಂ ಮತ್ತು ಭಾರತೀಯ ಸಂಪ್ರದಾಯಗಳ ಒಡನಾಟದ ಬಗೆಗೆ ಬರೆಯಲಾಗಿದೆ. ನಾಡಿನ ಕೆಲ ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

೨ನೇ ಪುಟದಿಂದ

ಕೆಲ ಕಾಲ ಮೈಸೂರು ಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಕೂಡ ಸೇವೆ ಸಲ್ಲಿಸಿದರು.ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಹಾಗೂ ಆಧ್ಯಕ್ಷರಾಗಿ ಸೇವೆ ಸಲ್ಲಿಸಿರುತ್ತಾರೆ.

ಸಾಹಿತ್ಯ ಸಾಧನೆಗಳು; ಮೂರ್ತಿ ರಾಯರು ಕನ್ನಡ,ಸಂಸ್ಕೃತ ಮತ್ತು ಆಂಗ್ಲ ಭಾಷೆಯಲ್ಲಿ ಮೂವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ, ಇವುಗಳಲ್ಲಿ ಕಥೆಗಳು, ಕಾದಂಬರಿ , ಅನುವಾದ, ವಿಮರ್ಶೆ, ಲೇಖನ ಗ್ರಂಥಗಳು ಸೇರಿವೆ. ಅವರ “ಆಷಾಡಭೂತಿ” ಕೃತಿಯನ್ನು ಆಧರಿಸಿ “ಸುಬ್ಬಾ ಶಾಸ್ತ್ರೀ” ಎಂಬ ಕನ್ನಡ ಚಲನಚಿತ್ರ ನಿರ್ಮಾಣವಾಗಿದೆ.

ಪ್ರಶಸ್ತಿ–ಗೌರವಗಳು; ಅವರಿಗೆ ಹಲವಾರು ಪ್ರಶಸ್ತಿ ಗೌರವಗಳು ಸಂದಿವೆ. ಅವುಗಳಲ್ಲಿ ಪ್ರಮುಖವಾದವು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಮೈಸೂರು ವಿಶ್ವವಿದ್ಯಾಲಯದ ಗೌರವ ಡಿಲೀಟ್, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಪಂಪ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ ಹಾಗೂ ಮುಂತಾದವು. ಕೈವಾರದಲ್ಲಿ ನಡದ ೫೬ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಆಧ್ಯಕ್ಷತೆ. ಶತಾಯುಷಿ ಹೆಬ್ಬಾಳು ಅವರ ಅಭಿನಂದನಾ ಗ್ರಂಥ

ನಿಧನ; ೨೮–೦೮–೨೦೦೨

**ಹೆಸರು: ಸೇಡಿಯಾಪು ಕೃಷ್ಣಭಟ್ಟರು**

ಕಾವ್ಯನಾಮ; ಇಲ್ಲ

ಹುಟ್ಟಿದ ಸ್ಥಳ– ದಿನಾಂಕ; ಬಂಟ್ವಾಳ ತಾಲೂಕಿನ ಸೇಡಿಯಾಪು ಎಂಬ ಹಳ್ಳಿಯಲ್ಲಿ, ೦೮–೦೬–೧೯೦೨

ತಂದೆ–ತಾಯಿ; ಪಂಜಿಗುಡ್ಡೆ ರಾಮಭಟ್ಟರು, ಮೂಕಾಂಬಿಕೆ.

ಶಿಕ್ಷಣ; ೯ನೇ ತರಗತಿ, ಮುಂದೆ ಮದರಾಸು ಸರ್ಕಾರ ನಡೆಸುತ್ತಿದ್ದ ‘ವಿದ್ವಾನ್’ ಪರೀಕ್ಷಾ ಪರಂಗತರಾದರು. ಜೊತೆಗೆ ಮನೆಯಲ್ಲಿಯೇ ಕುಳಿತೇ ಕನ್ನಡ– ಸಂಸ್ಕೃತಗಳಲ್ಲಿ ಪ್ರಭುತ್ವವನ್ನು ಪಡೆದರು.

ವೃತ್ತಿ; ಶಿಕ್ಷಕರು, ಸಾಹಿತಿಗಳು. ಗಾಂಧೀಜಿಯ ಕರೆಗೆ ಓಗೊಟ್ಟು, ಖಾದಿ ಪ್ರಚಾರದಲ್ಲಿ ನಿರತರಾದರು. ಮನೆಯಲ್ಲಿಯೇ ಆಯುರ್ವೇದ ವೈದ್ಯ ಪದ್ಧತಿಯನ್ನು ಅರಿತು ದವಾಖಾನೆಯನ್ನು ತೆರದರು. ಮಂಗಳೂರಿನ ಸೆಂಟ್ ಅಲೋಸಿಯಸ್ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿ, ಅದೇ ಕಾಲೇಜಿನಲ್ಲಿ ಟ್ಯೂಟರ್ ಆಗಿ, ಉಪನ್ಯಾಸಕರಾಗಿ ಸೇವೆಸಲ್ಲಿಸಿ ೧೯೫೭ರಲ್ಲಿ ನಿವೃತ್ತರಾದರು.

ಸಾಹಿತ್ಯಸಾಧನೆಗಳು; ಕನ್ನಡದ ಪ್ರಮುಖ ಸಾಹಿತಿಗಳಲ್ಲಿ ಒಬ್ಬರಾದ ಕೃಷ್ಣಭಟ್ಟರು ಕನ್ನಡ ವ್ಯಾಕರಣದ ಬಗ್ಗೆ,ಛಂದಸ್ಸಿನ ಬಗ್ಗೆ ವಿಶೇಷವಾದ ಅಧ್ಯಯನ ನಡೆಸಿ ಹಲವಾರು ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ಅವರೊಬ್ಬ ಸರಸಕವಿ, ಮತ್ತು ಕಥನಕುಶಲಿ, ಎಂಬುದನ್ನುಅವರ ‘ತರುಣ ಧಮನಿ’ಅಶ್ವಮೇಧ, ಕೃಷ್ಣಕುಮಾರಿ, ಪುಣ್ಯ ಲಹರಿಗಳೆಂಬ ನೀಳ್ಗವಿತೆಗಳು ಸಮರ್ಥಿಸುತ್ತವೆ. ಕನ್ನಡ ವರ್ಣಗಳು, ಭಾಷ ವಿಜ್ಞಾನದ ಕೃತಿಯಾದರೆ, ಕೆಲವು ದೇಶನಾಮಗಳು, ದೇಶೀಯ ನಾಮಗಳನ್ನು ಕುರಿತ ಸಂಶೋಧನಾ ಕೃತಿ. ಚಂದ್ರ ಖಂಡ ಮತ್ತು ಕೆಲವು ಸಣ್ಣ ಕಾವ್ಯಗಳು, ಪಳಮೆಗಳು, ಕನ್ನಡಗೀತಿಕೆಯ ಲಕ್ಷಣ ಮತ್ತು ಧಾಟಿ ಛಂದೋಗತಿ ಮತ್ತು ಕನ್ನಡ ಛಂದಸ್ಸುಅವರ ಅತ್ಯಂತ ಮಹತ್ವದ ಕೃತಿಗಳು.’ತಥ್ಯದರ್ಶನ’ ಕೃತಿ ಆಂಗ್ಲ ಭಾಷೆಗೆ “ Discovery of Fact”, ಎಂದು ತರ್ಜುಮೆಯಾಗಿದೆ.

ಪ್ರಶಸ್ತಿ–ಗೌರವಗಳು; ಪಂಪ ಪ್ರಶಸ್ತಿ ೧೯೯೪ ರಲ್ಲಿ (ವಿಚಾರ ಪ್ರಪಂಚ ಕೃತಿಗೆ) ವರ್ಧಮಾನ ಪ್ರಶಸ್ತಿ ( ಛಂದೋಗತಿ ಕೃತಿಗೆ) ಮೈಸೂರು ವಿಶ್ವವಿದ್ಯಾಲಯದ ಸುವರ್ಣ ಮಹೋತ್ಸವ ಪುರಸ್ಕಾರ, ೧೯೭೨ರಲ್ಲಿ ಕರ್ನಾಟಕ ಸರ್ಕಾರದ ಶ್ರೇಷ್ಠ ವಿದ್ವಾಂಸರೆಂದು ಗೌರವಿಸಿದೆ.ಶತಾಂಜಲಿ ಎನ್ನುವುದು ಅವರ ಗೌರವ ಗ್ರಂಥದ ಹೆಸರು.

ನಿಧನ; ತಮ್ಮ ೯೫ನೇ ವಯಸ್ಸಿನಲ್ಲಿ ತಮ್ಮ ಜನುಮ ದಿನದಂದೇ ಇಹ ಲೋಕವನ್ನು ತ್ಯಜಿಸಿದರು. ಅಂದೇ ಅವರ ತಥ್ಯದರ್ಶನ ಕೃತಿಯ ಆಂಗ್ಲ ಅನುವಾದ “ Discovery of Fact” ಲೋಕಾರ್ಪಣೆಯಾಯಿತು

**ಹೆಸರು: ತ,ಸು.ಶಾಮರಾಯರು**

ಕಾವ್ಯನಾಮ; ಡಾ.ತ.ಸು.ಶಾಮರಾಯ

ಹುಟ್ಟಿದ ಸ್ಥಳ- ದಿನಾಂಕ; ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ತಳುಕು ಗ್ರಾಮ. ೧೨-೦೬-೧೯೦೬

ತಂದೆ-ತಾಯಿ; ಸುಬ್ಬಣ್ಣ ಲಕ್ಷ್ಮೀದೇವಮ್ಮ

ಶಿಕ್ಷಣ; ಮೈಸೂರುನಲ್ಲಿ ಬಿ. ಎಂ. ಶ್ರೀ, ಡಿ. ಎಲ್.ಎನ್, ಕುವೆಂಪು, ತೀ.ನಂ.ಶ್ರೀ,ಯವರ ಶಿಷ್ಯರಾಗಿ. ಬಿ. ಎ. ( ಆನರ್ಸ್ ) ಸ್ವರ್ಣಪದಕದೊಂದಿಗೆ ಪಡೆದು, ೧೯೪೪ರಲ್ಲಿ ಕುವೆಂಪು ಅವರ ಮಾರ್ಗದರ್ಶನದಲ್ಲಿ 'ಕನ್ನಡ ನಾಟಕ' ಪ್ರಬಂಧ ಮಂಡಿಸಿ ಎಂ. ಎ ಪದವಿ ಗಳಿಸಿದರು.

ವೃತ್ತಿ; ಪ್ರೈಮರಿ ಶಾಲಾ ಅಧ್ಯಾಪಕರಾಗಿ, ಮುಖ್ಯೋಪಾಧ್ಯಾಯರಾಗಿ, ಕಾಲೇಜು ಅಧ್ಯಾಪಕರಾಗಿ, ಮೈಸೂರು ವಿಶ್ವವಿದ್ಯಾಲಯಪ್ರಸಾರಂಗದ ನಿರ್ದೇಶಕರಾಗಿ, ಮಹಾಗ್ರಂಥಪಾಲಕರಾಗಿ ಸೇವೆಸಲ್ಲಿಸಿ ನಿವೃತ್ತರಾಗಿರುತ್ತಾರೆ.

ಸಾಹಿತ್ಯಸಾಧನೆಗಳು; ವ್ಯಾಕರಣ-ಕೋಶಕ್ಕೆ ಸಂಬಂದಿಸಿದ ೫ ಕೃತಿಗಳು, ಕನ್ನಡ ನಾಟಕ, ಕನ್ನಡ ಸಾಹಿತ್ಯ ಚರಿತ್ರೆ, ಪಂಪ,ಮುದ್ದಣ್ಣ, ರತ್ನಾಕರವರ್ಣಿ ಮುಂತಾದ ಸಾಹಿತ್ಯ ಚರಿತ್ರೆ , ಮಡದಿ- ಕಾದಂಬರಿ, ಮೂರು ತಲೆಮಾರು ಮುಂತಾದ ೭೦ ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ.

ಪ್ರಶಸ್ತಿ-ಗೌರವಗಳು; ಕರ್ನಾಟಕ ಸಾಹಿತ್ಯಆಕಾಡಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಚಾವುಂಡರಾಯ ಪ್ರಶಸ್ತಿ , ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್. 'ಕನ್ನಡ ಸಾಹಿತ್ಯ ರತ್ನ', 'ಧೀಶ್ರೀ' "ಸ್ವಸ್ತಿ" ಶಾಮರಾಯರ ಅಭಿನಂದನಾ ಗ್ರಂಥ.

ನಿಧನ; ೨೧-೦೮-೧೯೯೬

ಹೆಸರು: ಜಯದೇವಿ

ಕಾವ್ಯನಾಮ; ಜಯದೇವಿ ತಾಯಿ ಲಿಗಾಡೆ

ಹುಟ್ಟಿದ ಸ್ಥಳ- ದಿನಾಂಕ; ಮಹಾರಾಷ್ಟ್ರದ ಸೊಲ್ಲಾಪುರ , ೨೩-೦೬-೧೯೧೨

ತಂದೆ-ತಾಯಿ; ಚನ್ನಬಸಪ್ಪ, ಸಂಗವ್ವ ( ಸಂಗಮ್ಮ )

ಶಿಕ್ಷಣ; ೫ನೇ ತರಗತಿಯವರಗೆ ಮರಾಠಿಯಲ್ಲಿ ಕಲಿತು ನಂತರ ಕನ್ನಡ ಕಲಿತು, ಮೆಟ್ರಿಕ್ ನಲ್ಲಿ ಉತ್ತೀರ್ಣರಾಗಿ, ಕನ್ನಡ ಸಾಹಿತ್ಯ, ಅದರಲ್ಲೂ ಶರಣ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದರು. ವ್ಯವಹಾರಕ್ಕೆ ತಕ್ಕಂತೆ ಇಂಗ್ಲೀಷ್ ಭಾಷಾ ಜ್ಞಾನವನ್ನೂ ಸಂಪಾದಿಸಿದರು.

ವೃತ್ತಿ; ಸಾಹಿತಿ ಮತ್ತು ಸಮಾಜಸೇವೆ , ಕರ್ನಾಟಕ ಏಕೀಕರಣಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟ ಧೀರ ಮಹಿಳೆ . "ನಾನಂತೂ ಏಕೀಕರಣ-ಕ್ಕಾಗಿ ಪ್ರಾಣ ತ್ಯಜಿಸಲೂ ಸಿದ್ದ" ಎಂಬ ಅವರ ಮಾತು, ಹೋರಾಟಗಾರರಲ್ಲಿ ಮಿಂಚಿನ ಸಂಚಲನ ಉಂಟುಮಾಡಿತು.

ಸಾಹಿತ್ಯಸಾಧನೆಗಳು; ಕನ್ನಡದ ಅಪರೂಪ ಕೃತಿಗಳಲ್ಲಿ ಒಂದಾದ ಶ್ರೀ ಸಿದ್ಧರಾಮ ಪುರಾಣವು ಸೇರಿ, ಕನ್ನಡ ಮತ್ತು ಮರಾಠಿ ಭಾಷೆಗಳಲ್ಲಿ ೧೪ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ತಾಯಿಯವರು ಸುಮಾರು ೪೦೦೦೦ಕ್ಕೂ ಹೆಚ್ಚು ಪದ್ಯಗಳನ್ನೂ ರಚಿಸಿದ್ದಾರೆ.

ಪ್ರಶಸ್ತಿ-ಗೌರವಗಳು; ರಾಜ್ಯ ಸಾಹಿತ್ಯ ಮತ್ತು ಲಲಿತ ಕಲಾ ಅಕಾಡಮಿಪ್ರಶಸ್ತಿ, ೧೯೭೪ರಲ್ಲಿ ಮಂಡ್ಯದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಕರ್ನಾಟಕ ವಿಶ್ವವಿದ್ಯಾಲಯದ ಜಾನಪದ ಸಮ್ಮೇಳನದ ಅಧ್ಯಕ್ಷತೆ, ಕರ್ನಾಟಕ ವಿಶ್ವವಿದ್ಯಾಲಯದ ಡಿ.ಲಿಟ್ ಪದವಿ.

ನಿಧನ; ೨೬-೦೭-೧೯೮೬

ಹೆಸರು: ಸಿದ್ಧಯ್ಯ ಪುರಾಣಿಕ

ಕಾವ್ಯನಾಮ; ಕಾವ್ಯಾನಂದ

ಹುಟ್ಟಿದ ಸ್ಥಳ- ದಿನಾಂಕ; ಈಗಿನ ಕೊಪ್ಪಳ(ರಾಯಚೂರು )ಜಿಲ್ಲೆಯ ಯಲುಬುರ್ಗಿ ತಾಲೂಕಿನ ದ್ಯಾಂಪುರ ಎಂಬ ಹಳ್ಳಿ, ೧೮-೦೬-೧೯೧೮

ತಂದೆ-ತಾಯಿ; ಕಲ್ಲಿನಾಥ ಶಾಸ್ತ್ರಿ, ದಾನಮ್ಮ

ಶಿಕ್ಷಣ; ಮೆಟ್ರಿಕ್ ಶಿಕ್ಷಣದಲ್ಲಿ, ಉಸ್ಮಾನಿಯಾ ವಿ.ವಿ ಗೆ ಮೂರನೇ ಸ್ಥಾನ ಪಡೆದಿದ್ದರೆ, ಬಿ. ಎ ಪರೀಕ್ಷೆಯಲ್ಲಿ ವಿ.ವಿ.ಗೆ ಪ್ರಥಮ ಸ್ಥಾನ ಪಡೆದ ವಿದ್ಯಾರ್ಥಿ.

ವೃತ್ತಿ; ತಹಶೀಲ್ದಾರರಾಗಿ ಉದ್ಯೋಗವನ್ನು ಪ್ರಾರಂಭಿಸಿ ಹಲವಾರು ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸಿ ದಕ್ಷತೆ ಮತ್ತು ಪ್ರಾಮಾಣಿಕತೆಗೆ ಹೆಸರಾಗಿ ಸೇವೆಯಿಂದ ನಿವೃತ್ತರಾದರು.

ಸಾಹಿತ್ಯಸಾಧನೆಗಳು; ಅವರು ಕನ್ನಡ, ಉರ್ದು, ಇಂಗ್ಲಿಷ್, ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯ ಹೊಂದಿದ್ದರು. ನಾಟಕಗಳು,ಮಕ್ಕಳಿಗಾಗಿ ಸಾಹಿತ್ಯ, ಬಸವಣ್ಣನವರ ಜೀವನ ಹಾಗೂ ಸಂದೇಶ, ಜೀವನ ಚರಿತ್ರೆಗಳು, ಎರಡು ಕಥಾ ಸಂಕಲಗಳು, ೧೩ಕ್ಕೂ ಹೆಚ್ಚು ಕೃತಿಗಳ ಸಂಪಾದನೆ, ಹಲವಾರು ಅನುವಾದಗಳು ಕೇಂದ್ರ-ರಾಜ್ಯ ಸಾಹಿತ್ಯ ಅಕಾಡಮಿಗಳ ಸದಸ್ಯರಾಗಿ, ಬಸವ ಸಮಿತಿಯ ಅಧ್ಯಕ್ಷರಾಗಿ, ಕರ್ನಾಟಕ ಜಾನಪದ ಟ್ರಸ್ಟಿನ ಟ್ರಸ್ಟಿಗಳಾಗಿ, ಬಿ.ಎಂ.ಶ್ರೀಪ್ರತಿಷ್ಠಾನದ ಕಾರ್ಯ ಸಮಿತಿಯ ಸದಸ್ಯರಾಗಿ ಡಾಕ್ಟರ್ ಸರೋಜಿನಿ ಮಹಿಷಿಯ ಸಮಿತಿಯ ಸದಸ್ಯರಾಗಿ, ಕನ್ನಡದ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದವರು.

ಪ್ರಶಸ್ತಿ-ಗೌರವಗಳು; ಗುಲ್ಬರ್ಗದಲ್ಲಿ ನಡೆದ ೫೮ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಕರ್ನಾಟಕ ವಿಶ್ವ ವಿದ್ಯಾಲಯದ ಡಾ-ಕ್ಟರೇಟ ಸೇರಿದಂತೆ ಅನೇಕ ಗೌರವಗಳು ಪುರಾಣಿಕರಿಗೆ ಸಂದಾಯವಾಗಿವೆ

ನಿಧನ; ೫-೯-೧೯೯೪

ಹೆಸರು: ಕುಳಕುಂದ ಶಿವರಾಯ

ಕಾವ್ಯನಾಮ; ನಿರಂಜನ

ಹುಟ್ಟಿದ ಸ್ಥಳ- ದಿನಾಂಕ; ದಕ್ಷಿಣ ಕನ್ನಡ ಜಿಲ್ಲೆಯ ಕುಳಕುಂದ ೧೫೦-೦೬-೧೯೨೪

ತಂದೆ-ತಾಯಿ; ಶ್ರೀನಿವಾಸರಾಯರು, ಚಿನ್ನಮ್ಮ

ಶಿಕ್ಷಣ; ಎಸ್ ಎಸ್ ಎಲ್' ಸಿ

ವೃತ್ತಿ; ಸಾಹಿತಿ , ಪತ್ರಿಕೋದ್ಯಮಿ.ಸಮಾಜ ಸುಧಾರಕ, ರೈತ ಪರ ಹೋರಾಟಗಾರ. ಗಾಂಧೀಜಿ, ಕಾರ್ಲ್ ಮಾರ್ಕ್ಸ್, ವಾಲ್ದಿಮೀರ್ ಲೆನಿನ್ ರ ವಿಚಾರಧಾರೆಗಳಿಂದ ಪ್ರಭಾವಿತರಾದರು. ೧೯೪೨ರಿಂದ ರಾಷ್ಟ್ರ ಬಂಧು ಪತ್ರಿಕೆಯಲ್ಲಿ , ಬಸವರಾಜ್ ಕಟ್ಟೀಮನಿ ಯವರ ಉಷಾ ಪತ್ರಿಕೆಯಲ್ಲಿ ಸಂಪಾದಕರಾಗಿ , ಚಿತ್ರಗುಪ್ತ, ತಾಯಿ ನಾಡುವಿನ ಸೋದರ ಪತ್ರಿಕೆಯಲ್ಲಿ, ಜನಪ್ರಗತಿ ಪತ್ರಿಕೆಗೆ, ಕರ್ಮವೀರ ವಾರ ಪತ್ರಿಕೆಗೆ ಅಂಕಣಗಳನ್ನು ಬರೆಯುತ್ತಿದ್ದರು.ಪ್ರಜಾಮತ ಪತ್ರಿಕೆಯಲ್ಲಿ ಸಹ ಸಂಪಾದಕರಾಗಿ ದುಡಿಯುತ್ತಿದ್ದರು. ಕಮ್ಯೂನಿಸ್ಟ್ ಪಕ್ಷದ ಮುಖವಾಣಿ ಜನಶಕ್ತಿಯ ಸಂಪಾದಕರಾಗಿಯೂ ದುಡಿದರು. ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ, ಬೆಂಗಳೂರಿನ ತಾಯಿನಾಡು, ಡೈಲಿ ನ್ಯೂಸ್ ಜನವಾಣಿ ದೈನಿಕಗಳಿಗೆ ಮಂಗಳೂರು ಸುದ್ದಿಗಾರರಾಗಿ ದುಡಿದರು. ಕಮ್ಯೂನಿಸ್ಟ್ ಸಿದ್ಧಾಂತದಿಂದ ಭ್ರಮನಿರಸನಗೊಂಡು ಕಮ್ಯೂನಿಸ್ಟ್ ಪಕ್ಷದಿಂದ ಹೊರಬಂದು ನಿರಂಜನ ಎಂಬ ಕಾವ್ಯನಾಮದಿಂದ ಬರೆಯಲು ಪ್ರಾರಂಭಿಸಿದರು. ಇಂಡಿಯನ್ ನ್ಯೂಸ್ ಅಂಡ್ ಫೀಚರ್ ಅಂಡ್ ಆಲಯನ್ಸ್ (ದೆಹಲಿಯಇನ್ಫಾ) ಸಂಸ್ಥೆಗೆ ಕಾರ್ಯನಿರತ ಪತ್ರಿಕೋದ್ಯಮಿಯಾಗಿ ದುಡಿದರು.

ಸಾಹಿತ್ಯಸಾಧನೆಗಳು; ಸುಮಾರು ೨೫ ಕಾದಂಬರಿಗಳು , ೧೨ ಕಥಾಸಂಕಲನಗಳು , ೬ ನಾಟಕಗಳು, ಜೀವನ ವೃತ್ತ, ವ್ಯಕ್ತಿ ಚಿತ್ರಸಂಗ್ರಹ , ಲೇಖನಗಳ ಸಂಗ್ರಹದ ೮ ಪುಸ್ತಕಗಳು, ಅಂಕಣ ೮ ಕೃತಿಗಳು, ರಾಜಕೀಯ ಭಾಷಾಂತರದ ೧೫ ಕೃತಿಗಳಲ್ಲದೆ ಕರ್ನಾಟಕ ಸಹಕಾರಿ ಪ್ರಕಾಶನದ ೭ ಸಂಪುಟಗಳಲ್ಲಿ ಪ್ರಕಟವಾದ ಜ್ಞಾನಗಂಗೋತ್ರಿ, ೨೫ ಸಂಪುಟಗಳಲ್ಲಿ ಪ್ರಕಟಗೊಂಡ ವಿಶ್ವ ಕಥಾಕೋಶ ಇವು ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯಾಗಿದೆ

ಪ್ರಶಸ್ತಿ-ಗೌರವಗಳು; ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ,

ಸೋವಿಯೆಟ್ ಲ್ಯಾಂಡ್ ನೆಹರು ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನಿಂದ ಗೌರವ ಸದಸ್ಯತ್ವ ಹಾಗೂ ಗೌರವ ಸಂಪುಟವಾಗಿ ಮುದ್ರಿಸಿದ ಪ್ರತಿಧ್ವನಿ ಗ್ರಂಥ , ಪುತ್ತೂರಿನ ಕರ್ನಾಟಕ ಸಂಘದಿಂದ ಅರ್ಪಿಸಿದ ಗೌರವ ಗ್ರಂಥ 'ನಿರಂಜನ ಅಭಿನಂದನ'.

ನಿಧನ; ೧೩.೦೩.೧೯೯೨

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-05-2019

೧೯-೫-೨೦೧೯

## ಡಿ.ವಿ.ಜಿ, ಕ.ವೆಂ.ರಾಘವಾಚಾರ್ ದತ್ತಿ ಕಾರ್ಯಕ್ರಮ

**ವಿಚಾರ ಸಂಕಿರಣ : ಸುದ್ದಿ ವಾಹಿನಿಗಳ ಸುತ್ತ ಮುತ್ತ**

**ಉಪನ್ಯಾಸ : ಶ್ರೀ ಪ್ರೇಮ್‌ಕುಮಾರ್ ಹರಿಯಬ್ಬೆ**

ಪತ್ರಕರ್ತರು, ಪ್ರಜಾವಾಣಿ

**ವಿಷಯ : ಸುದ್ದಿ ವಾಹಿನಿಗಳು ಮತ್ತು ಸಾಮಾಜಿಕ ಜವಾಬ್ದಾರಿ**

ಅಧ್ಯಕ್ಷತೆ : **ಶ್ರೀ ಮಹಾದೇವ ಪ್ರಕಾಶ್**

ಖ್ಯಾತ ಪತ್ರಕರ್ತರು , 'ಈ ಭಾನುವಾರ' ಸಂಪಾದಕರು

ಪ್ರಾರಂಭದಲ್ಲಿ ಡಾ.ಆರ್.ಲಕ್ಷ್ಮೀನಾರಾಯಣ ಅವರು, ನಾಡು ಕಂಡ ಇಬ್ಬರು ಶ್ರೇಷ್ಠ ವಿದ್ವಾಂಸರಾದ ಡಿ.ವಿ.ಜಿ. ಮತ್ತು ಸು.ವೆಂ. ರಾಘವಾಚಾರ್ ಅವರ ಕೊಡುಗೆಗಳನ್ನು ಮತ್ತು ಕನ್ನಡ ಭಾಷಾ ಶುದ್ಧತೆಯ ಬಗ್ಗೆ ಅವರಿಗಿದ್ದ ಕಾಳಜಿಯನ್ನು ಸಂಕ್ಷಿಪ್ತವಾಗಿ, ಉದಾಹರಣೆಗಳ ಸಹಿತ ವಿವರಿಸಿದರು. ಕಾರ್ಯಕ್ರಮಕ್ಕೆ ಆಗಮಿಸಿದ ಎಲ್ಲಾ ವಿದ್ವಾಂಸರನ್ನು ಸ್ವಾಗತಿಸಿದರು.

ಡಾ. ವಿಜಯಾ ಸುಬ್ಬರಾಜ್, ನಾಡಗೀತೆಯನ್ನು ಹಾಡಿದರು.

ಮುದ್ರಣ ಮಾಧ್ಯಮದಲ್ಲೇ ಮೂವತ್ತೆರೆಡು ವರ್ಷಗಳ ದೀರ್ಘಾವಧಿ ಸೇವೆ ಸಲ್ಲಿಸಿದ ಶ್ರೀ ಪ್ರೇಮ್‌ಕುಮಾರ್ ಹರಿಯಬ್ಬೆ ಅವರು ತಮ್ಮ ಅಮೂಲ್ಯವಾದ ಅನುಭವಗಳನ್ನು ಹಂಚಿಕೊಂಡರು. ಸಾಮಾನ್ಯ ಜನರಿಗೂ ತಿಳಿಯುವಂತಹ ಭಾಷೆಯನ್ನು ತಮ್ಮ ಬರಹಗಳಲ್ಲಿ ಬಳಸಬೇಕೆಂಬ ನಿಯಮವು ಜಾರಿಯಲ್ಲಿತ್ತು ಮತ್ತು ಎಲ್ಲರೂ ಅದನ್ನು ಜವಾಬ್ದಾರಿಯಿಂದ ಪಾಲಿಸಬೇಕಾಗಿತ್ತು. ಜನಸಾಮಾನ್ಯರಿಗೆ ಕೆಲವು ಸಂದರ್ಭಗಳಲ್ಲಿ ಉಪೇಕ್ಷೆಯಿಂದಾಗಲೀ ಅಥವಾ ಸಂವಿಧಾನದಿಂದಾಗಲೀ ನ್ಯಾಯ ದೊರಕದೇ ಅನ್ಯಾಯವಾಗಿದ್ದ ಸಂದರ್ಭಗಳಲ್ಲಿ, ಮಾಧ್ಯಮದ ಮೂಲಕವಾದರೂ ಪರಿಹಾರ ದೊರಕಿಸುವ ಸರ್ವ ಪ್ರಯತ್ನಗಳನ್ನು ಮಾಡಲು ಪತ್ರಕರ್ತರಿಗೆ ಸಲಹೆ ನೀಡಿದರು.

ತಮ್ಮ ವೃತ್ತಿ ಜೀವನ ಸಮಯದಲ್ಲಿ ಕೆಲಸದ ಒತ್ತಡಗಳಿದ್ದು ಹಲವು ಬಾರಿ ಜಾಹಿರಾತುದಾರರ/ ರಾಜಕಾರಣಿಗಳ ಒತ್ತಡದಿಂದಾಗಿ ವಿಜ್ಞಾನ, ಶಿಶು ಸಾಹಿತ್ಯ, ಹಿರಿಯ ನಾಗರೀಕರ ಅಂಕಣಗಳನ್ನು ಅನಿವಾರ್ಯವಾಗಿ ಕೈಬಿಡಬೇಕಾದ ಸಂದರ್ಭಗಳನ್ನು ನೆನಪಿಸಿಕೊಂಡರು.

ಈ ವಿಚಾರ ಸಂಕಿರಣದಲ್ಲಿ ಹಾಜರಿದ್ದ ಖ್ಯಾತ ಪರ್ತಕರ್ತರು ಮತ್ತು ಸಿನಿಮಾ ಸೆನ್ಸಾರ್ ಬೋರ್ಡ್‌ನ ಸದಸ್ಯರಾದ ಶ್ರೀ ಶ್ರೀಧರಮೂರ್ತಿಯವರು ತಮ್ಮ ಅನುಭವವನ್ನು ಹಂಚಿಕೊಂಡರು. ಇತ್ತೀಚಿನ ವರ್ಷಗಳಲ್ಲಿ ಟಿವಿ ಸುದ್ಧಿವಾಹಿನಿಗಳಲ್ಲಿ ಆ್ಯಂಕರಿಂಗ್ ಹುದ್ದೆ ಪಡೆಯಲು ಎಂ.ಎ. ವ್ಯಾಸಂಗ ಮಾಡಿರುವ ವಿದ್ಯಾರ್ಥಿಗಳು ಮುಗಿಬೀಳುತ್ತಿರುವ ವಿಷಯವನ್ನು ಪ್ರಸ್ತಾಪಿಸಿದರು. ಸುದ್ಧಿ ಸಂಪಾದಕರ ಆತುರತೆ ಮತ್ತು ಮಾಹಿತಿ ಕೊರತೆಯಿಂದಾಗಿ, ಆಗುವ ಪ್ರಮಾದಗಳ ಉದಾಹರಣೆಗಳನ್ನು ನೀಡಿ ಹಂಚಿಕೊಂಡರು. ಬಹು ಸಂಖ್ಯೆಯಲ್ಲಿ ಸುದ್ಧಿ ವಾಹಿನಿಗಳಿದ್ದು, ತಮ್ಮ ಅಸ್ಥಿತ್ವಕ್ಕಾಗಿ ಟಿಆರ್.ಪಿ ಮೇಲೆ ಅವಲಂಭಿತವಾಗಿರುವ ಸಂದರ್ಭಗಳಲ್ಲಿ, ಗುಣಮಟ್ಟದ ಪ್ರಸಾರದ ಬಗ್ಗೆ ಹಾಗೂ ಭಾಷೆಯ ಬಳಕೆಯಲ್ಲಿ ದೋಷವಿದ್ದು, ನಂತರ ವಿವಾದ ಸೃಷ್ಟಿಸುವ ಸಂದರ್ಭಗಳನ್ನು ತಿಳಿಸಿದರು.

ಅಧ್ಯಕ್ಷೀಯ ಭಾಷಣ ಮಾಡಿದ ಶ್ರೀ ಮಹದೇವ ಪ್ರಕಾಶ್ ಅವರು ಅರಿವು ಮತ್ತು ಆಚಾರ ಪ್ರತಿಕೋದ್ಯಮದ ಎರಡು ಕಣ್ಣುಗಳಾಗಿದ್ದು ಜ್ಞಾನ ಮತ್ತು ನೀತಿ ಸಂಹಿತೆ ಸಮ್ಮಿಳಿತವಾಗಿರುವೆಡೆ, ವಿಶ್ವಾಸಾರ್ಹತೆ ಗಳಿಸುಕೊಳ್ಳುವುದು ಸುಗಮ. ಅರಿವಿಲ್ಲದ ಕಡೆ ಅಹಂಕಾರ, ಅಪ್ರಮಾಣಿಕತೆ ಹಾಗೂ ಅನಾಚಾರಕ್ಕೆ ಆಸ್ಪದ ಕೊಡುತ್ತದೆ ಎಂದು ಹೇಳಿ ಕೆಲವು ಸುದ್ಧಿಮಾಧ್ಯಮಗಳ ಮತ್ತು ವಾಹಿನಿಗಳ ಉದಾಹರಣೆಗಳನ್ನು ನೀಡಿದರು. ಮಹಾತ್ಮ ಗಾಂಧೀಜಿಯವರು ಹಾಗೂ ಡಾ. ಬಾಬಾ ಸಾಹೇಬ ಅಂಬೇಡ್ಕರ್ ಅವರು ಭಾರತದ ಜನತೆಯನ್ನು ಜಾಗೃತಗೊಳಿಸಿ ದೇಶಕ್ಕೆ ಸ್ವಾತಂತ್ರ್ಯ ಲಭಿಸುವಲ್ಲಿ ಹಾಗೂ ದಲಿತರ ಶೋಷಣೆ ವಿರುದ್ಧ ದನಿ ಎತ್ತುವಲ್ಲಿ ತಮ್ಮ ಪತ್ರಿಕೆಗಳು ವಹಿಸಿದ ಪಾತ್ರವನ್ನು ಸ್ಮರಿಸಿಕೊಂಡರು.

ಪತ್ರಿಕೋದ್ಯಮಿಗಳಿಗೆ ಮತ್ತು ಸುದ್ದಿ ವಾಹಿನಿಯ ನಿರೂಪಕರಿಗೆ ಗತಿಸಿದ ಇತಿಹಾಸದ ಬಗ್ಗೆ ಅರಿವು ಅತ್ಯಗತ್ಯವೆಂದು ಹೇಳಿ, ಅರಿವಿಲ್ಲದೆ ಆದ ಕೆಲವು ಪ್ರಮಾದಗಳನ್ನು ವಿವರಿಸಿ, ಜನಗಳ ವಿಶ್ವಾಸಾರ್ಹತೆ ಉಳಿಸಿಕೊಳ್ಳುವುದು. ವಾಹಿನಿಗಳ ಜವಾಬ್ದಾರಿ ಎಂದು ಅಭಿಪ್ರಾಯ ಪಟ್ಟರು.

ಶ್ರೀ ರವೀಂದ್ರನಾಥ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮವು ಮುಕ್ತಾಯಗೊಂಡಿತು.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.......................................................................................

.......................................................................................................

.......................................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭